# ಪ್ರೇಮಯೋಗಿನಿ

ಅ ಥ ವಾ

# ಅನುಪಮೆಯ ಪ್ರೇಮ

ಮೂಲ ಲೇಖಕರು :

ದಿವಂಗತ ಶ್ರೀ ಶರಚ್ಚಂದ್ರ ಚಟ್ಟೋಪಾಧ್ಯಾಯರು

ಅನುವಾದಕರು :

**ಕೆ. ನಾಗರಾಜರಾವ್**

# ಅರಿಕೆ

---

ಇದು ಪೂಜ್ಯರಾದ ದಿವಂಗತ ಶ್ರೀ ಶರಚ್ಚಂದ್ರ ಚಟ್ಟೋಪಾಧ್ಯಾಯರ “ಅನುಪಮಾ ಕಾ ಪ್ರೇಮ್” ಕಾದಂಬರಿಯ ಅನುವಾದ. ಇದನ್ನು ಕನ್ನಡಕ್ಕೆ ಅನುವಾವ ಮಾಡಬೇಕೆಂದು ಪ್ರೇರೇಪಿಸಿ ಸಹಾಯ ಮಾಡಿದವರು ನನ್ನ ಮಿತ್ರರೂ, ಮತ್ತು ಶ್ರೀ ಶರಚ್ಚಂದ್ರರ ಕೆಲವು ಕಾದಂಬರಿಗಳನ್ನು ಕನ್ನಡಕ್ಕೆ ಅನುವಾದಿಸಿ ಪರಿಚಿತರಾಗಿರುವ ಶ್ರೀ ಗುರುನಾಥ ಜೋಶಿ ಅವರು. ಅವರ ಪ್ರೇರಣೆ ಇಲ್ಲದಿದ್ದರೆ ನಾನು ಅನುವಾದ ಕಾರ್ಯಕ್ಕೆ ತೊಡಗುತ್ತಿದ್ದೆನೋ ಇಲ್ಲವೋ ಗೊತ್ತಿಲ್ಲ. ಮೂಲ ಲೇಖಕರ ಪಡಿಯಚ್ಚನ್ನು ಕೊಟ್ಟ ‘ತಾಯಿನಾಡು’ ಪತ್ರಿಕೆಯ ಸಂಪಾದಕರಿಗೆ ನಾನು ಕೃತಜ್ಞನಾಗಿದ್ದೇನೆ. ಈ ಪುಟ್ಟ ಪುಸ್ತಕವನ್ನು ಕನ್ನಡಿಗರ ಹಸ್ತದಲ್ಲಿಡಲು ಸಹಾಯಮಾಡಿದವರೆಲ್ಲರಿಗೂ ನಾನು ಚಿರ ಋಣಿಯು.

ಶ್ರೀ ಶರಚ್ಚಂದ್ರರ ಇನ್ನೂ ಕೆಲವು ಕಾದಂಬರಿಗಳನ್ನು ಕನ್ನಡಿಸಬೇಕೆಂಬ ಬಯಕೆ ಇದೆ. ಅದಕ್ಕೆ ಸಹೃದಯರಾದ ಕನ್ನಡಿಗರ ಸಹಾಯವು ಬೇಕೆಂಬುದೂ ನಿಜ !

೫೩, ರತ್ನವಿಲಾಸ ರಸ್ತೆ,
ಬಸವನಗುಡಿ, ಬೆಂಗಳೂರು ನಗರ,
೩೦—೪—೧೯೩೮.

ಸಿ. ಕೆ. ನಾಗರಾಜರಾವ್

# ಪ್ರೇಮ ಯೋಗಿನಿ

— ೧ —

ಹನ್ನೊಂದನೆಯ ವಯಸ್ಸಿನೊಳಗಾಗಿಯೇ ಅನುಪಮೆಯು ಕಾದಂಬರಿಗಳನ್ನು ಓದಿ ಓದಿ ತನ್ನ ಮೆದಳನ್ನು ಕೆಡಿಸಿಕೊಂಡಿದ್ದಳು. ಮನುಷ್ಯನ ಹೃದಯದಲ್ಲಿ ಎಷ್ಟು ಪ್ರೇಮವಿದೆ, ಎಷ್ಟು ಮಧುರತೆಯಿದೆ, ಎಷ್ಟು ಶೋಭೆಯಿದೆ, ಎಷ್ಟು ಸೌಂದರ್ಯವಿದೆ, ಎಷ್ಟು ತೃಷೆಯಿದೆ ಎಂಬುದೆಲ್ಲವನ್ನೂ ಭೇದಿಸಿ, ತನ್ನ ತಲೆಯಲ್ಲಿ ಸಂಗ್ರಹಿಸಿಟ್ಟಿದ್ದೇನೆ ಮತ್ತು ಮನುಷ್ಯನ ಚರಿತ್ರೆ ಮತ್ತು ಅವನ ಸ್ವಭಾವದ ವಿಚಾರವು ತನ್ನ ಭಾಗಕ್ಕೆ ನೀರುಕುಡಿದ ಹಾಗೆಂದೂ, ಪ್ರಪಂಚದಲ್ಲಿ ತಾನು ಕಲಿತುಕೊಳ್ಳಬೇಕಾದದ್ದಿನ್ನೇನೂ ಉಳಿದಿಲ್ಲ; ಎಲ್ಲವನ್ನೂ ತಿಳಿದುಕೊಂಡಿದ್ದೇನೆ; ಎಲ್ಲವನ್ನೂ ಕಲಿತುಕೊಂಡಿದ್ದೇನೆ ಎಂದೂ ಅವಳು ತಿಳಿದುಕೊಂಡಿದ್ದಳು. ಸತೀತ್ವದ ಜ್ಯೋತಿಯ ವಿಷಯವನ್ನು ತಾನು ಯಾವ ದೃಷ್ಟಿಯಿಂದ ನೋಡುತ್ತಾಳೊ ಮತ್ತು ಪ್ರೇಮಮಹಿಮೆಯನ್ನು ತಾನು ಏನೆಂದು ತಿಳಿದುಕೊಂಡಿದ್ದಾಳೋ ಹಾಗೆಯೇ ಅವನ್ನು ಬೇರೆ ಕೆಲವರೂ ತಿಳಿದುಕೊಳ್ಳಲು ಶಕ್ಯವೆಂಬ ಮಾತಿನ ಮೇಲೆ ಅನುಪಮೆಯು ವಿಶ್ವಾಸವಿಡಲಾರಳು. ಅನುಪಮೆಯು, "ತಾನೊಂದು ಮಾಧವೀಲತೆ. ಸದ್ಯಕ್ಕೆ ಅದರಲ್ಲಿ ಹೂಗಳು ಬಿಡಲಿವೆ. ಇಂತಹ ಸ್ಥಿತಿಯಲ್ಲಿ ಆಧಾರಸ್ತಂಭಲ್ಲದ ವಿನಃ ಅರಳುವ ಸ್ಥಿತಿಯನ್ನು ಹೊಂದಿರುವ ಮೊಗ್ಗುಗಳು ಯಾವ ರೀತಿಯಿಂದಲೂ ಪೂರ್ಣ ಅರಳಲಾರವು"

ಎಂದು ಯೋಚಿಸಿದಳು. ಈ ಕಾರಣದಿಂದ ಅವಳು ಒಬ್ಬ
ನವ ಯೌವನದಿಂದ ತುಂಬಿತುಳುಕುವ ಕಾಂತನನ್ನು ಅರಿಸಿ
ಅರಸಿ ಮನದಲ್ಲಿಯೇ ನಿಶ್ಚಯಿಸಿಕೊಂಡಳು ಮತ್ತು ನಾಲ್ಕಾ
ರುದಿನಗಳಲ್ಲಿಯೇ ಅವನಿಗೆ ಹೃದಯ, ಮನ ಯೌವನಾದಿ
ಗಳೆಲ್ಲವನ್ನೂ ಅರ್ಪಿಸಿಬಿಟ್ಟಳು. ಮನದಲ್ಲಿಯೇ ಮನವನ್ನು
ಕೊಟ್ಟು ತೆಗೆದುಕೊಳ್ಳುವುದಕ್ಕೆ ಎಲ್ಲರಿಗೂ ಸಮನಾದ ಅಧಿ
ಕಾರವಿದೆ. ಆದರೆ ಅಪ್ಪಿಕೊಳ್ಳುವ ಮೊದಲು ಅನುಮತಿಯ
ಅವಶ್ಯಕತೆಯೂ ಉಂಟು. ಅವಳು ಗಾಬರಿಯಾದುದು ಈ
ವಿಚಾರಕ್ಕಾಗಿಯೇ! ತನ್ನ ನವೀನ ಮನದಾಣ್ಮನಿಗೆ, ತಾನು
ಅವನನ್ನು ಆಶ್ರಯಿಸಿರುವ ಮಾಧವೀಲತೆಯೆಂದೂ ಮೊ
ಗ್ಗುಗಳು ಅರಳಲು ಸಿದ್ಧವಾಗಿವೆಯೆಂದೂ, ಆಶ್ರಯ
ಕೊಡದಿದ್ದಲ್ಲಿ, ಈಗಲೇ ತನ್ನ ಮೊಗ್ಗುಗಳ ಸಮೇತ
ಭೂಮಿಯಮೇಲೆ ಹೊರಳಾಡುತ್ತಾ ಪ್ರಾಣಕೊಟ್ಟು ಬಿಡ
ಬೇಕಾದೀತೆಂದೂ ಹೇಗೆ ತಿಳಿಯಹೇಳಲಿ ಎಂಬುವೇ ಗಾಬ
ರಿಗೆ ಕಾರಣ.

ಆದರೆ ಆ ಆಧಾರಭೂತನು ಇಷ್ಟೂ ತಿಳಿದುಕೊಳ್ಳಲಾ
ರದೆ ಹೋದ. ಅನುಪಮೆಯ ಪ್ರೇಮವು ದಿನದಿನಕ್ಕೆ ಬೆಳೆ
ಯುತ್ತಲೇ ಹೋಯಿತು. ಅಮೃತದಲ್ಲಿ ವಿಷ; ಸುಖದಲ್ಲಿ
ದುಃಖ; ಪ್ರಣಯದಲ್ಲಿ ವಿಚ್ಛೇದವೆಂದು ಚಿರಪ್ರಸಿದ್ಧವಾಗಿದೆ.
ನಾಲ್ಕಾರು ದಿನಗಳಮೇಲೆ ಅನುಪಮೆಯು ತನ್ನಲ್ಲಿಯೇ,
"ಸ್ವಾಮಿಯೇ ನೀನು ನನ್ನನ್ನು ಸ್ವೀಕಾರಮಾಡು, ಮಾಡದಿರು;
ನೋಡು ಅಥವಾ ನೋಡದಿರು; ನಾನಂತೂ ಸರ್ವದಾ ನಿನ್ನ
ದಾಸಿ. ಪ್ರಾಣಹೋದರೂ ಇದೇ ಸಿದ್ಧ! ನಾನಂತೂ ನಿನ್ನ
ನ್ನು ಯಾವ ರೀತಿಯಿಂದಲೂ ಬಿಡಲಾರೆ. ಈ ಜನ್ಮದಲ್ಲಿ

ನನ್ನ ಪನಾಗದಿದ್ದರೆ ಮುಂದಿನಜನ್ಮದಲ್ಲಿ ಖಂಡಿತವಾಗಿಯೂ ನನ್ನವನಾಗೇ ಆಗುತ್ತಿ—ನನ್ನನ್ನು ಸೇರೇ ಸೇರುತ್ತಿ. ಸತೀ ಸಾಧ್ವಿಯ ಕೈಗಳಲ್ಲಿ ಎಷ್ಟು ಬಲವಿರುತ್ತದೆ ಎಂಬುದನ್ನು ಆಗ ನೋಡಬೇಕು" ಎಂದು ಹೇಳಿಕೊಂಡಳು.

ಅನುಪಮೆಯು ದೊಡ್ಡ ಮನುಷ್ಯರ ಮಗಳು. ಅವರ ಮನೆಗೆ ಸೇರಿದ ಒಂದು ಉದ್ಯಾನವೂ ಮತ್ತು ಮನೋರಮ್ಯ ವಾದ ಒಂದು ಸರೋವರವೂ ಇವೆ. ಅಲ್ಲಿ ಚಂದ್ರೋದಯ ವಾಗುತ್ತದೆ. ಕಮಲಪುಷ್ಪಗಳು ವಿಕಸಿತವಾಗುತ್ತವೆ. ಇಲ್ಲೇ-ಈ ಉದ್ಯಾನದಲ್ಲೇ-ಅವಳು ಸುತ್ತುತ್ತಾ ವಿರಹವ್ಯಥಯನ್ನು ಅನುಭವಿಸುತ್ತಿದ್ದಳು. ಕೂದಲನ್ನು ಬಿರಿ ಹುಯ್ದುಕೊಂಡು ಅಲಂಕಾರವನ್ನು ತ್ಯಜಿಸಿ, ದೇಹವನ್ನೆಲ್ಲಾ ಮಲಿನ ಮಾಡಿ ಕೊಂಡು, ಪ್ರೇಮಯೋಗಿನಿಯಾಗಿ ಯಾವಾಗಲಾದರೂ ಒಮ್ಮೆ ಸರೋವರದನೀರಿನಲ್ಲಿ ಮುಖವನ್ನು ನೋಡಿಕೊಳ್ಳು ತ್ತಿದ್ದಳು. ಕೆಲವು ವೇಳೆ ಕಣ್ಣೀರಿನಿಂದ ವಕ್ಷಸ್ಥಳವನ್ನು ನೆನೆಸಿಕೊಂಡು ಗುಲಾಬಿ ಹೂವನ್ನು ಮುತ್ತಿಡುತ್ತಿದ್ದಳು. ಇನ್ನು ಕೆಲವು ವೇಳೆ ಸೆರಗನ್ನು ಹಾಸಿ ಮರದ ಕೆಳಗೆ ಹೊರ ಳಾಡುತ್ತಾ ದೀರ್ಘವಾದ ನಿಶ್ವಾಸವನ್ನು ಬಿಡುತ್ತಿದ್ದಳು. ಅವಳಿಗೆ ಊಟದಲ್ಲಿ ರುಚಿಯಿಲ್ಲ; ನಿದ್ರೆಮಾಡುವ ಇಚ್ಛೆ ಯಿಲ್ಲ; ಶೃಂಗಾರದ ಕಡೆ ಮನಸ್ಸಿಲ್ಲ; ಮಾತುಕತೆಗಳಲ್ಲಿ ಇಷ್ಟ ವಿಷ್ಟೂ ಇರಲಿಲ್ಲ. ಹೀಗೆ ಕೊರಗಿ ಅನುಪಮೆಯು ಒಣಗಿ ಒಣಗಿ ಕಡ್ಡಿಯಾಗುತ್ತಿದ್ದಳು.

ಇದನ್ನು ನೋಡಿ ಅವಳ ತಾಯಿಯು ಬಹಳ ಚಿಂತೆಗೊ ಳಗಾದರು. "ಇವಳಲ್ಲದೆ ಬೇರೊಬ್ಬ ಮಗಳಿಲ್ಲ. ಇವಳೂ

ಹೀಗೇಕಾದಳು—ಏನಾಗಿರಬಹುದು" ಎಂದು ಆಕೆಯ ಯೋಚನೆ. ಕೇಳಿದರೆ ಯಾವ ಪ್ರತ್ಯುತ್ತರವನ್ನು ಕೊಡುತ್ತಾಳೋ ಎಂಬುದು ಯಾರಿಗೂ ತಿಳಿಯಲು ಸಾಧ್ಯವಿಲ್ಲ. ಗಂಟಲಿನ ಮಾತು ಗಂಟಲೊಳಗೇ ಐಕ್ಯವಾದರೆ ಅರ್ಥವಾಗುವ ಬಗೆ?

ಅನುಪಮೆಯ ತಾಯಿಯು ಒಂದು ದಿನ ಜಗದ್ಬಂಧು ಬಾಬುವಿನೊಡನೆ, "ಇಲ್ಲಿ ಕೇಳಿ ಸ್ವಲ್ಪ! ಅವಳ ಕಡೆ ನೋಡೋದೇ ಇಲ್ಲವೇ? ನಿಮಗೆ ಒಬ್ಬಳಲ್ಲದೆ ಬೇರೊಬ್ಬ ಮಗಳಿಲ್ಲ. ಅವಳೂ ಕೂಡ ಉಪಚಾರವಿಲ್ಲದೆ, ಶುಶ್ರೂಷೆಯಿಲ್ಲದೆ ಮರಣೋನ್ಮುಖಳಾಗಿದ್ದಾಳೆ" ಎಂದು ಹೇಳಿದರು.

ಜಗದ್ಬಂಧು ಬಾಬುವು ವಿಸ್ಮಯದಿಂದ, "ಅವಳಿಗೆ ಏನಾಯಿತು?'' ಎಂದರು.

''ಅದು ನನಗೇನು ಗೊತ್ತು? ಡಾಕ್ಟರು ನೋಡಿ ಯಾವ ತರಹ ಖಾಯಿಲೆಯೂ ಇಲ್ಲವೆಂದು ಹೇಳಿದರು"

'' ಹಾಗಾದರೆ ಇವಳೇಕೆ ಹೀಗಾಗುತ್ತಿದ್ದಾಳೆ " ಜಗದ್ಬಂಧು ಬಾಬುವು ಉದಾಶೀನದಿಂದ ಹೇಳಿದರು. ''ನನಗೆ ಹೇಗೆ ಗೊತ್ತಾದೀತು"

''ಹಾಗಾದರೆ ನಮ್ಮ ಹುಡುಗಿಯು ಕೃಶವಾಗುತ್ತಾ ಆಗುತ್ತಾ ಸತ್ತು ಹೋದರೆ"

''ಒಳ್ಳೆ, ಸಂಕಟವೇ? ಜ್ವರವಿಲ್ಲ ಗಿರವಿಲ್ಲ. ಒಂದುವೇಳೆ ಸತ್ತು ಹೋದರೆ ತಡೆಗಟ್ಟಿ ಬದುಕಿಸಲು ಸಾಧ್ಯವೇ?"

ಅನುಪಮೆಯ ತಾಯಿಯು ಒಣಗಿದ ಮುಖದಿಂದ ತಮ್ಮ ದೊಡ್ಡ ಸೊಸೆಯ ಬಳಿ ಸಾರಿ, ''ಅಮ್ಮಯ್ಯ! ನನ್ನ ಅನು ಹೀಗೇಕೆ ಸುಮ್ಮನೆ ಅಲೆದಾಡುತ್ತಾಳೆ" ಎಂದು ಕೇಳಿದರು.

"ನನಗೆ ಹೇಗೆ ತಿಳಿದುಕೊಳ್ಳಲು ಸಾಧ್ಯವಮ್ಮ ?"

"ನಿಮ್ಮ ನಿಮ್ಮಲ್ಲಿ ಮಾತುಕಥೆಗಳು ನಡೆಯುವುದಿಲ್ಲವೆ?"

"ಇಲ್ಲ"

ಆ ಗೃಹಣಿಯು ಅತ್ತಳು. "ಆಗ ಏನಾಗುತ್ತದೆ........ ಹೀಗೆ ಅನ್ನ, ನೀರು, ನಿದ್ದೆ ಇಲ್ಲದೆ ಈರೀತಿ ಉದ್ಯಾನದಲ್ಲಿ ಅಲೆದಾಡುತ್ತಿದ್ದರೆ ಎಷ್ಟುದಿನ ಬದುಕಿಯಾಳು? ನೀನು ಅವಳಿಗೆ ಯಾವುದಾದರೂ ರೀತಿಯಲ್ಲಿ ತಿಳಿಯಹೇಳಿ ದಾರಿಗೆಕರೆದುಕೊಂಡು ಬಾ. ಇಲ್ಲದಿದ್ದರೆ ನಾನೆಂದಾದರೂ ಭಾವಿಯಲ್ಲಿ ಬಿದ್ದು ಪ್ರಾಣಬಿಡುತ್ತೇನೆ" ಎಂದರು. ದೊಡ್ಡ ಸೊಸೆಯು ಬಹಳಹೊತ್ತು ಯೋಚಿಸಿ, "ವಿಚಾರಮಾಡಿ ಅವಳ ಮದುವೆಯನ್ನು ಮಾಡಿಬಿಡಿ. ಸಂಸಾರದ ಭಾರವು ತಲೆಯ ಮೇಲೆ ಬಿದ್ದಾಗ ತಾನಾಗಿಯೇ ಸರಿಹೋಗುತ್ತಾಳೆ" ಎಂದು ಹೇಳಿದಳು.

"ಒಳ್ಳೆಯದು. ಹಾಗಾದರೆ ಇವತ್ತೇ ಅವರೊಡನೆ ಈ ಮಾತನ್ನು ಹೇಳುತ್ತೇನೆ"

ಅನುಪಮೆಯ ತಂದೆಯು ಈ ಮಾತನ್ನು ಕೇಳಿ ನಗುತ್ತಾ, "ಕಲಿಕಾಲದ ಮಹಿಮೆ ! ಮಾಡಿಬಿಡು. ಮದುವೆ ಮಾಡಿಯೂ ನೋಡಿಬಿಡು. ಸರಿಹೋದರೂ ಹೋಗಬಹುದು" ಎಂದರು.

ಮಾರನೇ ದಿನವೇ ಮಧ್ಯಸ್ಥಗಾರನು ಬಂದನು. ಅನುಪಮೆಯು ದೊಡ್ಡವರ ಮಗಳು. ಮೇಲಾಗಿ ರೂಪವತಿ. ಅವಳನ್ನು ಪಡೆಯುವವರಿಗೇನು ಕಮ್ಮಿ. ಒಂದೇ ವಾರದಲ್ಲಿ

ಮಧ್ಯಸ್ಥಗಾರನು ವರನನ್ನು ಹೊಂದಿಸಿ ಜಗದ್ಬಂಧುಬಾಬು ವಿಗೆ ಸಮಾಚಾರವನ್ನು ತಿಳಿಸಿದನು. ಅವರು ಗೃಹಿಣಿಯೊಡನೆ ಹೇಳಿದರು. ಗೃಹಿಣಿಯು ದೊಡ್ಡ ಸೊಸೆಯೊಡನೆ; ಹೀಗೆಯೇ ಅನುಪಮೆಗೂ ಅರಿವಾಗಿಹೋಯಿತು.

ಒಂದೆರಡುದಿನ ಕಳೆದಮೇಲೆ, ಒಂದುದಿನ ಎರಡು ಗಂಟೆಯ ಸಮಯದಲ್ಲಿ ಅನುಪಮೆಯ ಮದುವೆಯ ವಿಚಾರವಾಗಿ ಮಾತುಕತೆಯಾಡುತ್ತಿದ್ದರು. ಇಷ್ಟರಲ್ಲಿ, ಕೂದಲನ್ನು ಕೆದರಿಕೊಂಡು, ಶಿಥಿಲವಸ್ತ್ರಾವೃತಳಾಗಿ, ಕೈಯಲ್ಲೊಂದು ಗುಲಾಬಿ ಹೂವನ್ನು ಹಿಡಿದುಕೊಂಡು ಅನುಪಮೆಯು ಬೊಂಬೆಯಂತೆ ಬಂದು ಅಲ್ಲಿ ನಿಂತಳು.

ಅನುಪಮೆಯ ತಾಯಿಯು ಹುಡುಗಿಯನ್ನು ನೋಡಿ ನಗುತ್ತಾ, "ನನ್ನ ಮಗಳು ಎಂತಹ ಯೋಗಿನಿಯಾಗಿಬಿಟ್ಟಿದ್ದಾಳೆ" ಎಂದರು.

ದೊಡ್ಡಸೊಸೆಯು ಮುಗುಳುನಗೆ ಸೂಸುತ್ತಾ, "ಮದುವೆಯಾಗುವುದೇ ತಡ ಇವೆಲ್ಲ ಮಂಗಮಾಯವಾಗಿ ಬಿಡುತ್ತವೆ. ಒಂದೆರಡು ಮಕ್ಕಳಾಗಿಬಿಟ್ಟರಂತೂ ಬೇರೆ ಮಾತೇ ಇಲ್ಲ" ಎಂದಳು. ಅನುಪಮೆಯು ಬೊಂಬೆಯಂತೆ ನಿಂತುಕೊಂಡು ಎಲ್ಲವನ್ನೂ ಕೇಳುತ್ತಿದ್ದಳು. ಸೊಸೆಯು, "ಅಮ್ಮಾ, ನಾದಿನಿಯವರ ಮದುವೆ ಯಾವತ್ತು" ಎಂದು ಪುನಃ ಕೇಳಿದಳು.

"ದಿನವಿನ್ನೂ ನಿಶ್ಚಯವಾಗಿಲ್ಲ".

"ನಾದಿನಿಯವರ ಗಂಡ ಏನನ್ನು ಓದುತ್ತಾರೆ?"

"ಈ ಸಲ ಬಿ.ಎ. ಪರೀಕ್ಷೆಗೆ ಕಟ್ಟುತ್ತಾರೆ".

"ಹಾಗಾದರೆ ಒಳ್ಳೇ ವರನೇ ಸಿಕ್ಕಹಾಗಾಯಿತು".

ಆಮೇಲೆ ದೊಡ್ಡ ಸೊಸೆಯು ತಮಾಷೆಮಾಡುವ ಸಲುವಾಗಿ ಮುಸಿನಗುತ್ತಾ, "ನೋಡಲು ವರನು ಸುಂದರನಾಗಿರದಿದ್ದರೆ ನಮ್ಮ ನಾದಿನಿಯವರಿಗೆ ಮನಸ್ಸಿಗೊಪ್ಪಿಗೆಯಾಗುವುದೇ ಇಲ್ಲ" ಎಂದಳು.

"ಏಕೆ? ಏಕೆ ಒಪ್ಪಿಗೆಯಾಗುವುದಿಲ್ಲ. ನೋಡಿದ್ದರಲ್ಲಿ ಆಳಿಯನು ನಮಗೇನೋ ಚೆನ್ನಾಗಿಯೇ ಇದ್ದಾನೆ".

ಈಗ ಮಾತ್ರ ಅನುಪಮೆಯು ಕತ್ತನ್ನು ಕೊಂಚ ಕೊಂಕಿಸಿ ಬಗ್ಗಿ ಕಾಲಿನ ಉಗುರಿನಿಂದ ನೆಲದ ಮಣ್ಣನ್ನು ಎಬ್ಬಲು ಪ್ರಯತ್ನಿಸುತ್ತಾ, "ನಾನು ಮದುವೆಯಾಗುವುದಿಲ್ಲ" ಎಂದಳು. ಅವಳ ತಾಯಿಗೆ ಈ ಮಾತುಗಳು ಸರಿಯಾಗಿ ಕೇಳಿಸಲಿಲ್ಲ. "ಏನು ಹೇಳಿದೆ" ಎಂದರು. ದೊಡ್ಡ ಸೊಸೆಗೆ ಕೇಳಿಸಿತ್ತು. ಅವಳು ಗಟ್ಟಿಯಾಗಿ ನಕ್ಕು, "ನಾದಿನಿಯವರು ಮದುವೆಯಾಗುವುದಿಲ್ಲವೆಂದು ಹೇಳುತ್ತಿದ್ದಾರೆ" ಎಂದು ಹೇಳಿದಳು.

"ಮದುವೆಯಾಗುವುದಿಲ್ಲವೇ?"

"ಇಲ್ಲ".

"ಆಗದಿದ್ದರೆ ?........" ಎಂದು ಅನುಪಮೆಯ ತಾಯಿಯು ನಿರಾಶೆಯ ಮುಖಮಾಡಿಕೊಂಡರೂ ಒಳಗೊಳಗೇ ಮುಗುಳುನಗುತ್ತಾ ಅಲ್ಲಿಂದೆದ್ದು ಹೊರಟು ಹೋದರು. ಆಕೆಯು ಹೊರಟುಹೋದಮೇಲೆ ದೊಡ್ಡ ಸೊಸೆಯು, "ಮದುವೆಯಾಗುವುದಿಲ್ಲವೇ" ಎಂದು ಅನುಪಮೆಯನ್ನು ಕೇಳಿದಳು.

ಅನುಪಮೆಯು ಮೊದಲಿನಂತೆಯೇ ಗಂಭೀರ ಮುಖಭಾವದಿಂದ "ಎಂದಿಗೂ ಇಲ್ಲ" ಎಂದಳು.

"ಏಕೆ"

" ಕಂಡಕಂಡವರನ್ನೆಲ್ಲಾ ಕತ್ತಿಗೆ ಕಟ್ಟಿಕೊಳ್ಳೋದು ಮದುವೆ ಅಲ್ಲ. ಮನಸ್ಸುಕೂಡಿದ ಹೊರತು ಮದುವೆಮಾಡುವುದು ತಪ್ಪು."

ದೊಡ್ಡ ಸೊಸೆಯು ಆಶ್ಚರ್ಯದಿಂದ ಅನುಪಮೆಯ ಮುಖದಕಡೆ ನೋಡುತ್ತಾ, " ಕತ್ತಿಗೆ ಕಟ್ಟಿಕೊಳ್ಳೋದು ಅಂತ ಯಾತಕ್ಕೆ ಹೇಳುತ್ತಾರೆ? ಹಾಗಾದರೆ ತಂದೆತಾಯಿಗಳು ಯಾರಿಗೂ ಒಪ್ಪಿಸದಿದ್ದರೆ ಹುಡುಗಿಯೇ ಹುಡುಕಿಕೊಂಡು ಒಪ್ಪಿ ಮದುವೆಮಾಡಿಕೊಳ್ಳುತ್ತಾಳೇನು?" ಎಂದು ಕೇಳಿದಳು.

"ಖಂಡಿತವಾಗಿಯೂ ಹೌದು".

"ಹಾಗಾದರೆ ನಿನ್ನ ದೃಷ್ಟಿಯಲ್ಲಿ ನನ್ನ ಮದುವೆಯೂ ತಪ್ಪು. ಮದುವೆಗೆ ಮುಂಚೆ ನಾನು ನಿನ್ನ ಸಹೋದರನ ಹೆಸರನ್ನು ಸಹ ಕೇಳಿರಲಿಲ್ಲವಲ್ಲ".

"ಎಲ್ಲರೂ ನಿನ್ನ ಹಾಗೇ ಇದ್ದಾರೇನು?"

ದೊಡ್ಡ ಸೊಸೆಗೆ ಮತ್ತೂ ನಗುಬಂತು. "ನಿನಗೆ ಯಾರಾದರೂ ಮನಒಲಿದವನು ಸಿಕ್ಕಿದ್ದಾನೇನು?"

ಅನುಪಮೆಯು ತನ್ನ ಅತ್ತಿಗೆಯ ಈ ಹಾಸ್ಯದಿಂದೊಡಗೂಡಿದ ವ್ಯಂಗ್ಯೋಕ್ತಿಗಳಿಂದ ತನ್ನ ಮುಖವನ್ನು ಮೊದಲಿಗಿಂತಲೂ ಗಂಭೀರಮಾಡಿಕೊಂಡು, "ಅತ್ತಿಗೆ, ತಮಾಷೆ

ಏಕೆ ಪ್ರಾಡುತ್ತೀರಿ. ಇದು ತಪಸ್ಸುಮಾಡುವ ಸಮಯವೆ?" ಎಂದಳು.

"ಏಕೆ? ಏನಾಯಿತು?"

"ಏನಾಯಿತು?-ಹಾಗಾದರೆ ಕೇಳಿ—". ತನ್ನ ಪತಿಯು ವಧೆಯು ತನ್ನ ಮುಂದೆಯೇ ಆಗುತ್ತಿರುವಂತೆ ಅನುಪಮೆಗೆ ಭಾಸವಾಯಿತು. ಕತಲೂಖಾನನ ಕೋಟೆಯಲ್ಲಿ ನಡೆದ ವಿಮಲಾ ಮತ್ತು ವೀರೇಂದ್ರಸಿಂಹರ ವಧೆಯ ದೃಶ್ಯವು ಕಣ್ಣುಮುಂದೆ ನಿಂತಂತಾಯಿತು. ಅನುಪಮೆಯು ಯೋಚಿಸಿದಳು, "ಅವರು ಹೇಗೆಮಾಡಿದರೋ ಹಾಗೆ ನಾನೂ ಮಾಡಲಾರೆನೇ?—ಸತಿಯು ಪ್ರಪಂಚದಲ್ಲಿ ಯಾರಿಗೂ ಹೆದರುವುದಿಲ್ಲ" ಎಂದು. ನೋಡುತ್ತಿದ್ದಂತೆಯೇ ಅವಳ ಕಣ್ಣುಗಳು ಅನೈಸರ್ಗಿಕವಾದ ತೇಜಸ್ಸಿನಿಂದ ಹೊಳೆಯತೊಡಗಿದವು. ಇದ್ದಕ್ಕಿದ್ದಂತೆಯೇ ಅವಳು ತನ್ನ ಸೆರಗನ್ನು ಸೊಂಟಕ್ಕೆ ಬಿಗಿದುಕೊಂಡಳು. ಇದನ್ನು ನೋಡಿ ದೊಡ್ಡ ಸೊಸೆಯು ಮೂರು ಹೆಜ್ಜೆ ಹಿಂದಕ್ಕೆ ಸರಿದಳು. ನಿಮಿಷಾರ್ಧದಲ್ಲಿ ಅನುಪಮೆಯು ಪಕ್ಕದಲ್ಲಿದ್ದ ಮಂಚದ ಕಾಲನ್ನು ಬಿಗಿದಪ್ಪಿಕೊಂಡು, ಮೇಲೆನೋಡುತ್ತಾ, ಗಟ್ಟಿಯಾಗಿ ಕಿರಚುತ್ತಾ ಹೇಳುತ್ತಿದ್ದಳು, "ಪ್ರಭು, ಸ್ವಾಮಿ, ಪ್ರಾಣನಾಥ ಪ್ರಪಂಚದ ಎದುರಿನಲ್ಲಿ ನಾನು ಇಂದು ನಿನ್ನನ್ನು ಸ್ವೀಕರಿಸುತ್ತೇನೆ. ನೀನೇ ನನ್ನ ಪ್ರಾಣನಾಥ.ಪ್ರಭು. ನೀನು ನನ್ನವನು. ನಾನು ನಿನ್ನವಳು! ಇದು ಮಂಚದ ಕಾಲಲ್ಲ. ನಿನ್ನ ಚರಣಯುಗಳಗಳು. ನಾನು ಧರ್ಮಸಾಕ್ಷಿಯಾಗಿ ನಿನ್ನನ್ನು ಪತಿಯನ್ನಾಗಿ ವರಿಸಿದ್ದೇನೆ. ನಿನ್ನ ಕಾಲುಗಳನ್ನು ಹಿಡಿದುಕೊಂಡು ಹೇಳುತ್ತೇನೆ. ಪ್ರಪಂಚದಲ್ಲಿ ನಿನ್ನ ಹೊರತು

ಯಾರೂ ನನ್ನ ಸ್ಪರ್ಶಕೂಡ ಮಾಡಲಾರರು. ಪ್ರಾಣವಿರು ವಾಗಲೇ ನಮ್ಮಿಬ್ಬರನ್ನೂ ಬೇರ್ಪಡಿಸಲು ಯಾರಿಗೆ ತಾನೇ ಸಾಧ್ಯ. ತಾಯೀ........ಜಗಜ್ಜನನೀ!........"ಎಂದು.

ದೊಡ್ಡಸೊಸೆಯು ಕಿರುಚುತ್ತಾ ಹೊರಕ್ಕೆ ಓಡಿಹೋದಳು. "ಅಯ್ಯೋ ನೋಡಿ! ಲಿಲ್ಲೀಗೆ ಏನಾಗಿ ಹೋಗಿದೆ? ಹೇಗೆ ಮಾಡುತ್ತಾಳೆ?" ನೋಡುತ್ತಿರುವಷ್ಟರಲ್ಲಿಯೇ ಗೃಹಿಣಿಯು ಓಡಿಬಂದರು. ಸೊಸೆಯ ಚೀತ್ಕಾರವು ಹೊರಗಿನವರಿಗೂ ಮುಟ್ಟಿಬಿಟ್ಟಿತ್ತು. "ಏನಾಯಿತು? ಏನಾಯಿತು?" ಎಂದು ಜಗದ್ಬಂಧು ಬಾಬುವೂ ಅವರ ಮಗ ಚಂದ್ರಬಾಬುವೂ ಓಡಿಬಂದರು. ಯಜಮಾನ ಯಜಮಾನಿ, ಮಗ ಸೊಸೆ, ದಾಸದಾಸಿಯರಿಂದ ಆ ಕೊಠಡಿಯು ತುಂಬಿಹೋಯಿತು. ಅನುಪಮೆಯು ಮೂರ್ಛಿತಳಾಗಿ ಮಂಚದ ಪಕ್ಕದಲ್ಲಿ ಬಿದ್ದಿದ್ದಳು. ಗೃಹಿಣಿಯು ಅಳಲು ಮೊದಲು ಮಾಡಿದಳು. "ಅಯ್ಯೋ! ನನ್ನ ಅನುಗೆ ಏನಾಗಿದೆಯಪ್ಪಾ! ಡಾಕ್ಟರನ್ನು ಕರೆಸಿ, ನೀರನ್ನು ತನ್ನಿ, ಗಾಳಿಬೀಸಿ—" ಇವೇ ಮೊದಲಾದ ಗುಲ್ಲೋಗುಲ್ಲನ್ನು ಕೇಳಿ ಬಡಾವಣೆಯ ಅಜು ಬಾಜಿನ ಅರ್ಧಜನವೆಲ್ಲಾ ಬಂದು ಸೇರಿದರು.

ಕೊಂಚ ಹೊತ್ತಾದ ಮೇಲೆ ಕಣ್ಣುಬಿಟ್ಟು, ಅನುಪಮೆಯು ನಿದಾನವಾಗಿ, "ನಾನೆಲ್ಲಿದ್ದೇನೆ" ಎಂದಳು. ಅವಳ ತಾಯಿಯು ಮುಖದಬಳಿ ಮುಖವಿಟ್ಟು ಸ್ನೇಹದಿಂದ, "ಏಕೆ ಮಗು? ನನ್ನ ತೊಡೆಯಮೇಲಿದ್ದೀಯಮ್ಮಾ ನೀನು" ಎಂದರು. ಅನುಪಮೆಯು ಒಂದು ದೀರ್ಘಶ್ವಾಸವನ್ನು ತೆಗೆದು ಕೊಂಡು ನಿಧಾನವಾಗಿ, "ಓ! ನಿನ್ನ ತೊಡೆಯಮೇಲೆ?

ಎಲ್ಲೋ, ಯಾವುದೋ ಒಂದು ಸ್ವಪ್ನರಾಜ್ಯದಲ್ಲಿ ಹರಿದಾ ಡುತ್ತಾ ಹೋಗುತ್ತಾ ಇದ್ದಂತೆ ಯೋಚಿಸುತ್ತಿದ್ದೆ'' ಎಂದಳು. ಅವಳ ಕಪೋಲಗಳಮೇಲೆ ಹರಿದ ನೀರು ತೊಟ್ಟುತೊಟ್ಟಾಗಿ ಉದುರುತ್ತಿತ್ತು. ತಾಯಿಯು ಆ ನೀರನ್ನು ಒರೆಸುತ್ತಾ ಕಾತರಳಾಗಿ, ''ಏಕೆ ಅಳುತ್ತಿದ್ದಿಯಾ ಮಗು. ಯಾರ ಸಂ ಗಡ ಮಾತನಾಡುತ್ತಾ ಇದ್ದೆ'' ಎಂದರು.

ಅನುಪಮೆಯು ದೀರ್ಘಶ್ವಾಸವೆಳೆದುಕೊಂಡು ಸುಮ್ಮನಾ ದಳು. ದೊಡ್ಡ ಸೊಸೆಯು ಚಂದ್ರಬಾಬುವನ್ನು ಒಂದು ಪಕ್ಕಕ್ಕೆ ಕರೆದು, ''ಎಲ್ಲರನ್ನೂ ಹೊರಟುಹೋಗಲು ಹೇಳಿ ಬಿಡಿ. ಈಗೇನು ಭಯವಿಲ್ಲ. ಲಿಲ್ಲಿಯು ಸರಿಯಾದಳು'' ಎಂದು ಹೇಳಿದಳು. ಎಲ್ಲರೂ ನಿಧಾನವಾಗಿ ಹೊರಟು ಹೋದರು. ರಾತ್ರಿ ದೊಡ್ಡ ಸೊಸೆಯು ಅನುಪಮೆಯ ಬಳಿಗೆ ಬಂದು ಕುಳಿತುಕೊಂಡು, "ಯಾರ ಜೊತೆಗೆ ಮದುವೆ ಯಾದರೆ ನಿನಗೆ ಸುಖವಾಗಿರುತ್ತೆ" ಎಂದು ಕೇಳಿದಳು.

ಅನುಪಮೆಯು ಕಣ್ಣುಗಳನ್ನು ಮುಚ್ಚಿ ಹೇಳಿದಳು, ''ಸುಖ ದುಃಖವು ನನ್ನಭಾಗಕ್ಕೆ ಏನೂ ಅಲ್ಲ. ಅವನೇ ನನ್ನ ಸ್ವಾಮಿ" ಎಂದು.

''ಅದೇನೋ ಗೊತ್ತಾಯಿತು - ಆದರೆ ಅವನು ಯಾರು"

''ಸುರೇಶ! ಸುರೇಶನೇ ನನ್ನ — —''

''ಸುರೇಶ? ರಾಖಾಲ್ ಮಜುಂದಾರರ ಮಗ''

''ಹೌದು ಅವನೇ!''

ರಾತ್ರಿಯೇ ಅನುಪಮೆಯ ತಾಯಿಗೆ ಈ ಮಾತುಗಳು ತಿಳಿದುಹೋದವು. ಮಾರನೇ ದಿನವೇ ಆಕೆಯು ಮಜುಂ

ದಾರರ ಮನೆಗೆ ಹೋದರು. ಮಾತುಮಾತಿನಲ್ಲಿ ಸುರೇಶನ ತಾಯಿಯೊಡನೆ ಆಕೆಯು, "ನಿನ್ನ ಮಗನೊಡನೆ ನನ್ನ ಮಗಳ ಲಗ್ನವಾಗಲಿ" ಎಂದು ಹೇಳಿದರು. ಸುರೇಶನ ತಾಯಿಯು ನಗುತ್ತಾ, "ಚೆನ್ನಾಯಿತು, ಸರಿ!" ಎಂದರು.

"ಸರಿ ಎಂದು ಹೇಳುವುದಷ್ಟೇ ಅಲ್ಲ. ನೀನು ಈ ಸಂಬಂಧವನ್ನು ಮಾಡಿಕೊಳ್ಳಲೇ ಬೇಕು."

"ಆದರೆ ಸುರೇಶನನ್ನೊಮ್ಮೆ ಕೇಳಿಬರುತ್ತೇನೆ. ಅವನು ಮನೆಯಲ್ಲೇ ಇದ್ದಾನೆ. ಅವನು ಒಪ್ಪಿದ್ದೇ ಆದರೆ ಅವನ ತಂದೆಯವರೇನು ನಿರಾಕರಿಸುವುದಿಲ್ಲ."

ಸುರೇಶನು ಈಗ ಬಿ. ಎ. ಪರೀಕ್ಷೆಗಾಗಿ ಮನೆಯಲ್ಲೇ ಅಭ್ಯಾಸ ಮಾಡುತ್ತಿದ್ದ. ಒಂದು ನಿಮಿಷವು ಅವನಿಗೆ ಒಂದು ವರ್ಷವಾಗಿ ತೋರುತ್ತಿತ್ತು. ಅವನ ತಾಯಿಯು ಮದುವೆಯ ವಿಷಯವಾಗಿ ಹೇಳಿದ್ದನ್ನು ಅವನು ಕೇಳಲೇ ಇಲ್ಲ. ಮತ್ತೆ ಹೇಳಿದರು, "ಸುರೇಶ, ಈಗ ನಿನಗೆ ಮದುವೆಯಾಗಬೇಕಾದ ವಯಸ್ಸು" ಎಂದು.

ಸುರೇಶನು ಮುಖವೆತ್ತಿ "ಹೌದು ಅದೇನೋ ಸರಿಯೆ. ಆದರೆ ಈಗಲೇ ಏನು? ಓದುವ ಸಮಯದಲ್ಲಿ ಈ ಮಾತುಗಳೆಲ್ಲ ಸರಿಹೋಗುವುದಿಲ್ಲ" ಎಂದು ಹೇಳಿದ.

ತಾಯಿಯು ಕೊಂಚ ಅಪ್ರತಿಭಳಾಗಿ ಹೇಳಿದಳು, "ಇಲ್ಲ ಇಲ್ಲ! ಈಗಲೇ ಅಲ್ಲ ಪರೀಕ್ಷೆ ಆಗಲಿ. ಪರೀಕ್ಷೆ ಆದಮೇಲೇ ಮದುವೆ ಆದೀತು" ಎಂದು.

"ಎಲ್ಲಿ"

"ಈ ಊರಿನಲ್ಲಿಯೋ! ಜಗದ್ಬಂಧುಬಾಬು ಅವರ ಮಗ ಳೊಡನೆ."

"ಏನು ಚಂದು ತಂಗೀ ಜೊತೇಲಿ – ಲಿಲ್ಲೀಂತ ಕರಿತಾ ರಲ್ಲ."

"ಲಿಲ್ಲಿ ಏಕೆ! ಅವಳ ಹೆಸರು ಅನುಪಮಾ"

ಸುರೇಶನು ಮುಗುಳುನಗೆಯಿಂದ ಹೇಳಿದ, "ಹೌದು ಅನುಪಮಾ! ಸುಡು ಆ ರೂಪಾನ. ನೋಡೋಕೆ ಅವ ಲಕ್ಷಣವಾಗಿದೆ" ಎಂದು.

"ಅವಲಕ್ಷಣವೇನು? ನೋಡೋಕೆ ಅಷ್ಟು ಚೆನ್ನಾಗಿ ದ್ದಾಳೆ!"

"ನೋಡೋಕೆ ಚೆನ್ನಾಗಿರಲೇಳು ಯಾರು ಬೇಡಾಂ ದರು? ಒಂದೇ ಊರಲ್ಲಿ ಮನೆ, ಅತ್ತೆ ಮನೆ. ನನಗೆ ಖಂ ಡಿತ ಇಷ್ಟವಿಲ್ಲ."

"ಇದರಲ್ಲಿ ಕೆಡಕೇನಿದೆ?"

"ಕೆಡಕಿನ ಮಾತು ಅತ್ತಲಾಗೆ ಬಿಟ್ಟುಬಿಡು. ಅಮ್ಮಾ ನೀನು ಹೋಗು. ಇನ್ನೂ ಓದಬೇಕಾದ್ದು ಬಹಳ ಇದೆ."

ಸುರೇಶನ ತಾಯಿಯು ಹಿಂದಿರುಗಿ ಬಂದು, "ಸುರೇಶನು ಒಂದೇ ಊರಿನಲ್ಲಿ ಮದುವೆ ಮಾಡಿಕೊಳ್ಳೋಕೆ ಯಾವ ತರಹದಿಂದಲೂ ಒಪ್ಪೋದಿಲ್ಲ" ಎಂದರು.

"ಅದೇಕೆ?"

"ನನಗದು ಗೊತ್ತಿಲ್ಲ."

ಅನುಪಮೆಯ ತಾಯಿಯು ಮಜುಂದಾರರ ಗೃಹಿಣಿಯ ಕೈಹಿಡಿದು ಕರುಣಾವ್ಯಂಜಕ ಭಾವದಿಂದ, "ಹಾಗಾಗಬಾರ

ದಮ್ಮಾ! ಈ ವಿವಾಹವನ್ನು ನೀನು ಮಾಡಲೇ ಬೇಕು" ಎಂದರು.

"ಹುಡುಗ ಒಪ್ಪದಿದ್ದರೆ ನಾ ನೇನು ಮಾಡಬೇಕು ಹೇಳು."

"ನೀನು ಮಾತುಕೊಟ್ಟ ವಿನಃ ನಾನು ಬಿಡೋದೇ ಇಲ್ಲ."

"ಹಾಗಾದರೆ ಇವತ್ತು ಸುಮ್ಮನಿರು. ನಾಳೆ ಇನ್ನೊಂದು ಸಲ ಹೇಳುತ್ತೇನೆ, ನೋಡೋಣ ಒಪ್ಪಿಸೋಕೆ ಸಾಧ್ಯ ವೇನೋ."

ಅನುವಿನ ತಾಯಿಯು ಮನೆಗೆ ಬಂದು ಜಗದ್ಬಂಧು ಬಾಬುವಿಗೆ ಹೇಳಿದರು, "ಅವರ ಸುರೇಶನೊಡನೆ ನನ್ನ ಅನು ಮದುವೆ ಆಗಲೇ ಬೇಕು. ಹೇಗಾದರೂ ಸರಿ. ಇದನ್ನು ಆಗುಮಾಡಿ" ಎಂದು.

"ಅದೇಕೆ? ರಾಯಃಗ್ರಾಮದಲ್ಲಿ ಹತ್ತಿರ ಹತ್ತಿರ ಎಲ್ಲಾ ಸರಿಹೋಗಿದೆ. ಆ ಸಂಬಂಧವನ್ನು ಬಿಟ್ಟುಬಿಡಬೇಕೇನು?"

"ಕಾರಣವಿದೆ!"

"ಏನು?"

"ಇನ್ನೇನು ಇಲ್ಲ. ಸುರೇಶನಂಥ ಗುಣವಂತನಾದ ಮತ್ತು ರೂಪವಂತನಾದ ಹುಡುಗ ಸಹಜವಾಗಿ ಎಲ್ಲಿಯೂ ಸಿಕ್ಕೋದಿಲ್ಲ. ಅಲ್ಲದೆ ನನಗೆ ಇರೋಕೊಬ್ಬಳೇ ಒಬ್ಬ ಮಗಳು. ಅವಳನ್ನು ದೂರದ ಊರಿಗೆ ಮದುವೆಮಾಡಿ ಕೊಡಲಾರೆ. ಸುರೇಶನ ಜೊತೆಗಾದರೆ ಇರೋ ಊರಿನಲ್ಲೇ ಮನಸ್ಸು ಬಂದಾಗ ನೋಡಬಹುದು."

"ಆಗಲಿ ಪ್ರಯತ್ನ ಮಾಡುತ್ತೇನೆ."

"ಬರೀ ಪ್ರಯತ್ನವಲ್ಲ– ಹೇಗಾದರೂ ಸಂಲಗ್ನ ಮಾಡಲೇ ಬೇಕಾಗುತ್ತೆ."

ಹೆಂಡತಿಯು ಮೂಗುತಿಯನ್ನು ಕುಣಿಸುವ ರೀತಿಯನ್ನು ನೋಡಿ ಜಗದ್ಬಂಧು ಬಾಬುವಿಗೆ ನಗು ಬಂದುಬಿಟ್ಟಿತು.

"ಖಂಡಿತ ಮಾಡುತ್ತೇನೆ" ಎಂದರು.

ಸಾಯಂಕಾಲವಾದ ಮೇಲೆ ಜಗದ್ಬಂಧು ಬಾಬುವು ಮಜುಂದಾರರ ಮನೆಯಿಂದ ಹಿಂದಿರುಗಿ ಬಂದು, ಹೆಂಡತಿಯೊಡನೆ "ವಿವಾಹವಾಗಲು ಸಾಧ್ಯವಿಲ್ಲ" ಎಂದು ಹೇಳಿದರು.

"ಏಕೆ? ಏನೇನು ಮಾತುಕತೆ ನಡೀತು?"

"ಏನು ಮಾಡಲಿ ಹೇಳು? ಅವರು ಒಪ್ಪದಿದ್ದರೆ, ಹುಡುಗೀನ ಅವರ ಮನೆಯಲ್ಲಿ ಬಲವಂತದಿಂದ ತಳ್ಳಿಬಿಟ್ಟು ಬರೋಕೆ ಸಾಧ್ಯವೆ ?"

"ಏಕೆ ಒಪ್ಪೋಲ್ಲ."

"ಒಂದೇ ಊರಲ್ಲಿ ಅವನಿಗೆ ಮದುವೆ ಆಗೋಕೆ ಇಷ್ಟ್ರೂ ಇಷ್ಟವಿಲ್ಲ."

ಅನುವಿನ ತಾಯಿಯು ಹಣೆ ಹಣೆ ಹೊಡೆದುಕೊಂಡು "ನನ್ನ ದುರಾದೃಷ್ಟ" ಎಂದರು.

ಮರು ದಿವಸವೇ ಆಕೆಯು ಸುರೇಶನ ತಾಯಿಯ ಬಳಿ ಹೋಗಿ, "ಅಮ್ಮಯ್ಯಾ, ವಿವಾಹಮಾಡಲೇಬೇಕು" ಎಂದು ಅಂಗಲಾಚಿದರು.

"ನನಗೇನೋ ಇಷ್ಟವಿದೆಯಮ್ಮ. ಆದರೆ ಹುಡುಗ ಒಪ್ಪೋದಿಲ್ಲವಲ್ಲ."

"ನಾನು ಗುಟ್ಟಾಗಿ ಇನ್ನೂ ಐದು ಸಾವಿರ ರೂಪಾಯಿ ಗಳನ್ನು ಕೊಡುತ್ತೇನೆ."

ದುಡ್ಡಿನ ಲೋಭವು ಎಲ್ಲಕ್ಕಿಂತಲೂ ದೊಡ್ಡದು. ಸುರೇಶನ ತಾಯಿಯು ಈ ಮಾತನ್ನು ಅವನ ತಂದೆಯವರಿಗೆ ಹೇಳಿದರು. ಅವರು ಸುರೇಶನನ್ನು ಕರೆದು, "ಸುರೇಶ ಈ ಮದುವೆಯನ್ನು ಮಾಡಿಕೊಳ್ಳಲೇ ಬೇಕು" ಎಂದರು.

"ಏಕೆ ?"

"ಏಕೆಂದರೇನಾಗುತ್ತೆ. ಈ ವಿವಾಹದ ವಿಷಯದಲ್ಲಿ ನಿನ್ನ ತಾಯಿಗೆ ತುಂಬ ಇಷ್ಟವಿದೆ. ನನ್ನ ಮನಸ್ಸಿನಲ್ಲಿಯೂ ಈ ವಿಚಾರವಿದ್ದೇ ಇದೆ. ಅದರ ಜೊತೆಗೆ ಬೇರೊಂದು ಕಾರಣವೂ ಇದೆ."

ಸುರೇಶನು ನೆಲವನ್ನು ನೋಡುತ್ತಾ, "ಇನ್ನೂ ಓದಬೇಕಾದ ಸಮಯ. ಪರೀಕ್ಷೆಗೆ ತೊಂದರೆಯಾದೀತು"ಎಂದನು.

"ಅದು ನನಗೂ ಗೊತ್ತಿದೆಯಪ್ಪಾ. ಪರೀಕ್ಷೆಗೆ ತೊಂದರೆ ಮಾಡಿಕೋ ಅಂತ ನಾನು ಹೇಳುವುದಿಲ್ಲವಲ್ಲ. ಪರೀಕ್ಷೆ ಮುಗಿದಮೇಲೆಯೇ ಮದುವೆಯಾದರೆ ಆಯಿತು".

"ನಿಮ್ಮಿಷ್ಟ"

ಅನುವಿನ ತಾಯಿಯ ಆನಂದಕ್ಕೆ ಪಾರವಿಲ್ಲ. ಆಕೆಯು ಈ ಮಾತನ್ನು ಗಂಡನೊಡನೆ ಹೇಳಿದರು. ಅಲ್ಲದೇ ಮನೆಯ ದಾಸದಾಸಿಯರು, ನೌಕರರೆಲ್ಲರಿಗೂ ಬಹಳ ಸಂತೋಷ ಸಂಭ್ರಮದಿಂದ ಸಮಾಚಾರವನ್ನು ತಿಳಿಸಿದರು.

ದೊಡ್ಡ ಸೊಸೆಯು ಅನುಪಮೆಯನ್ನು ಕರೆದು, "ಕೇಳಿದೆಯಾ ಅನು. ನಿನ್ನ ವರನನ್ನೇ ಹಿಡಿದುಬಿಟ್ಟಿದ್ದಾಯಿತು".

ಎಂದು ಹೇಳಿದಳು.

ಅನುಪಮೆಯು ಕೊಂಚ ಕೊಂಚ ಮುಸಿ ನಗುತ್ತಾ ನಾಚಿಕೆಯಿಂದ, ''ನಾನು ಮೊದಲಿನಿಂದಲೂ ತಿಳಿದುಕೊಂಡೇ ಇದ್ದೆ'' ಎಂದಳು.

''ಹೇಗೆ ತಿಳಿದುಕೊಂಡಿದ್ದೆ. ಕಾಗದ ಪತ್ರಗಳೇನಾದರೂ ನಡೆಯುತ್ತಿದ್ದವೇನು?''

''ಪ್ರೇಮವು ಅಂತರ್ಯಾಮಿ. ನಮ್ಮ ಕಾಗದ ಪತ್ರಗಳು ಮನಸ್ಸಿನಲ್ಲಿಯೇ ನಡೆಯುತ್ತಿದ್ದುವು''

''ಅನು, ನೀನೇ ಧನ್ಯೆ''!

ಅನುಪಮೆಯು ಹೊರಟು ಹೋದಮೇಲೆ ದೊಡ್ಡ ಸೊಸೆಯು ಮೆಲ್ಲಗೆ, ''ಇಷ್ಟು ಸಣ್ಣ ವಯಸ್ಸಿನಲ್ಲಿ ಇವಳ ಬಾಯಿಂದ ಇಷ್ಟು ದೊಡ್ಡ ದೊಡ್ಡ ಮಾತು. ಅದನ್ನು ಕೇಳಿ ನನ್ನ ಮೈಯುರಿಯುತ್ತೆ. 'ಮೂರು ಹೆತ್ತೋಳು ಆರು ಹೆತ್ತೋಳಿಗೆ ಮುಕ್ಕೋದನ್ನ ಕಲಿಸುತಾಳೆ' ಎನ್ನುವ ಗಾದೆ ಹಾಗಾಯಿತು ಇವಳು ನನಗೆ ಪ್ರೇಮವನ್ನು ಕಲಿಸ ತೊಡಗಿರುವುದು'' ಎಂದುಕೊಂಡಳು.

---

— ೨ —

ದುರ್ಬಲನಾದ ವಸುವು ಬೇಕಾದಷ್ಟು ಧನ, ಅಧಿಕಾರ ಗಳನ್ನು ಬಿಟ್ಟು ಪರಲೋಕವನ್ನೈದಿದನು. ಅವನ ಇಪ್ಪತ್ತು ವರುಷದ ಏಕಮಾತ್ರ ಪುತ್ರನಾದ ಲಲಿತಮೋಹನನು, ತಂದೆಯ ಶ್ರಾದ್ಧಾದಿಗಳು ಮುಗಿದಮೇಲೆ ಒಂದು ದಿನ ಪಾಠಶಾಲೆಗೆ ಹೋಗಿ ಉಪಾಧ್ಯಾಯರೊಡನೆ, "ಸರ್, ನನ್ನ ಹೆಸರನ್ನು ಹೊಡೆದುಹಾಕಿಬಿಡಿ'' ಎಂದು ಹೇಳಿದನು.

''ಏನು? ಏನು ಸಮಾಚಾರ?"

"ಬರೀ ಓದಿ ಬರಿಯೋಣದರಿಂದ ಏನಾಗುತ್ತೆ. ಯಾವು ದಕ್ಕಾಗಿ ಓದುಬರಹ ಕಲಿಯಬೇಕೋ ಅದು ನನ್ನ ಬಳಿ ಸಮೃದ್ಧಿಯಾಗಿದೆ. ನನ್ನ ತಂದೆಯವರು ನನಗಾಗಿ ತುಂಬ ಓದಿಬರೆದು ಮರಣಹೊಂದಿದ್ದಾರೆ. ''

ಉಪಾಧ್ಯಾಯರು ಕಣ್ಣುಮುಚ್ಚಿಕೊಂಡು ಮುಸಿನ ಗುತ್ತಾ, ''ಹಾಗಾದರೆ ಯೋಚನೆಯೇನು? ಖುಷಿಯಾಗಿ ಮಿಂದು, ತಿಂದು ಓಲ್ಯಾಡು" ಎಂದರು.

ಅಂದಿನಿಂದಲೇ ಲಲಿತಮೋಹನನ ವಿದ್ಯಾಭ್ಯಾಸಕ್ಕೆ ಮುಕ್ತಾಯವಾಯಿತು. ಅವನಿಗೆ ಒಂದುಕಡೆ ಚಿಕ್ಕವಯಸ್ಸು; ಇನ್ನೊಂದು ಕಡೆ ಕೈಯಲ್ಲಿ ಬೇಕಾದಷ್ಟು ದುಡ್ಡು. ಪಾಠ ಶಾಲೆಯನ್ನು ಬಿಟ್ಟದ್ದೇ ತಡ, ಬೇಕಾದಷ್ಟು ಜನ ಸ್ನೇಹಿ ತರು ಹೊಂದಿಕೊಂಡರು. ಆಮೇಲೆ ಕ್ರಮೇಣ ತುಂಬಾಕು, ಹೊಗೆಸೊಪ್ಪು, ಭಂಗೀ, ಹೆಂಡ, ಸಾರಾಯಿ, ನೃತ್ಯಗೀತಾದಿ ಗಳು ಒಂದಾಗುತ್ತಲೂ ಒಂದು ಅವನ ಬೈಟಕ್ ಖಾನೆಯನ್ನು

ಶೋಭಿಸತೊಡಗಿದವು. ಇತ್ತಲಾಗಿ ತಂದೆಯು ಸಂಪಾದಿಸಿ ಟ್ಟಿದ್ದ ಹಣವು ಸಾಗರವನ್ನು ಸೇರಲು ಶೀಘ್ರವಾಗಿ ಓಡುವ ನೀರಿನ ಅಲೆಗಳಂತೆ ಕೈಬಿಟ್ಟೋಡತೊಡಗಿತು. ತಾಯಿಯು ಅತ್ತು ಕರೆದು ಬಹಳ ತಿಳಿಯಹೇಳಿದರು. ಬೇರೆಯವರಿಂದ ತುಂಬ ಹೇಳಿಸಿಯಾಯಿತು. ಆದರೂ ಅವನು ಕೇಳಲಿಲ್ಲ.

ಒಂದು ದಿನ ಅವನು ಕಣ್ಣುಗಳನ್ನು ಕೆಂಪಗೆ ಮಾಡಿ ಕೊಂಡು ತಾಯಿಯ ಬಳಿಗೆ ಹೋಗಿ, " ಅಮ್ಮ ನನಗೀಗ ಐವತ್ತು ರೂಪಾಯಿ ಕೊಡು'' ಎಂದನು. ತಾಯಿಯು, "ನನ್ನ ಬಳಿ ಒಂದು ಕಾಸೂ ಇಲ್ಲ'' ಎಂದರು.

ಲಲಿತಮೋಹನನು ಇನ್ನೇನನ್ನೂ ಹೇಳದೆ ಒಂದುಕೊಡ ಲಿಯನ್ನು ತೆಗೆದುಕೊಂಡು ತಾಯಿಯ ಪೆಟ್ಟಿಗೆಯನ್ನು ಒಡೆದು ಅದರಿಂದ ಐವತ್ತು ರೂಪಾಯಿ ತೆಗೆದುಕೊಂಡು ಹೊರಡ ಲನುವಾದ. ತಾಯಿಯು ಸುಮ್ಮನೆ ನಿಂತ ನೋಡುತ್ತಿ ದ್ದರು. ಅಷ್ಟೇ ! ಏನನ್ನೂ ಹೇಳಲಿಲ್ಲ.

ಮೂರನೆಯ ದಿನ ಆಕೆಯು ಮಗನಿಗೆ ಕಬ್ಬಿಣದ ಪೆಟ್ಟಿ ಗೆಯ ಬೀಗದಕೈಯನ್ನು ಕೊಟ್ಟು, "ತಗೋಪ್ಪ ಕಬ್ಬಿಣದ ಪೆಟ್ಟಿಗೆಯ ಬೀಗದಕೈಯನ್ನ. ನಿಮ್ಮ ತಂದೆಯವರ ರೂಪಾ ಯಿಗಳಿವೆ. ಬೇಕಾದ ಹಾಗೆ ಖರ್ಚುಮಾಡಬಲ್ಲೆ. ನಾನಿ ನ್ನೇನನ್ನೂ ಹೇಳುವುದಿಲ್ಲ. ಆದರೆ ನಾನು ಹೊರಟುಹೋದ ಮೇಲೆ ನೀನು ಕಣ್ಣುಬಿಟ್ಟು ನೋಡಲೀಂತ ದೇವರನ್ನು ಪ್ರಾರ್ಥಿಸುತ್ತೇನೆ" ಎಂದರು.

ಲಲಿತಮೋಹನನು ವಿಸ್ಮಯದಿಂದ, " ಎಲ್ಲಿಗೆ ಹೋಗುತ್ತಿ"ಎಂದ.

"ಗೊತ್ತಿಲ್ಲ. ಪ್ರಾಣ ಕಳೆದುಕೊಂಡಮೇಲೆ ಎಲ್ಲಿಗೆಹೋಗ ಬೇಕಾಗುತ್ತೋ ಯಾರಿಗೆ ಗೊತ್ತು? ಸದ್ಗತಿ ಮಾತ್ರ ಸಿಕ್ಕೋಲ್ಲ ಅಂತ ಗೊತ್ತು. ಏನು ಮಾಡಲಿ ಹೇಳು. ನನ್ನ ಅದೃಷ್ಟ ಹಾಗಿದೆ"

"ಆತ್ಮಹತ್ಯೆ ಮಾಡಿಕೊಳ್ಳುತ್ತೀಯಾ?"

"ಬೇರೆದಾರಿ ಇನ್ನೇನಿದೆ. ನಿನ್ನನ್ನ ಹೊತ್ತುಹೆತ್ತು ಸಾಕಿದ್ದಕ್ಕೆ ಎಲ್ಲಾ ಸುಖವನ್ನೂ ಅನುಭವಿಸಿದ್ದಾಯಿತು. ಈಗ ಪ್ರತಿನಿತ್ಯವೂ ಮನೇಲಿ ಪರಕೆ ಏಟು ತಿನ್ನೋಕಿಂತ ಯಮ ದೂತನ ಅಗ್ನಿಕುಂಡದಲ್ಲಿ ಬೀಳೋದು ಕೆಟ್ಟದ್ದೆ?"

ಲಲಿತಮೋಹನನಿಗೆ ತಾಯಿಯ ಮನೋವೃತ್ತಿ ಚೆನ್ನಾಗಿ ಗೊತ್ತಿತ್ತು. ಆಕೆಯು ಸುಳ್ಳುಪಳ್ಳುಗಳಿಗೆಲ್ಲಾ ಜಗ್ಗೋದಿಲ್ಲಾಂತಲೂ ಗೊತ್ತಿತ್ತು. ಆಗ ಅವನು ಅಳತೊಡಗಿದ. ಮತ್ತು ಅವಳ ಕಾಲನ್ನು ಹಿಡಿದುಕೊಂಡು, "ಅಮ್ಮಾ ಈ ಸಲ—ಇದೊಂದು ಸಲ, ನೀನು ನನ್ನನ್ನು ಕ್ಷಮಿಸಿಬಿಡು. ಇನ್ನೆಂದಿಗೂ ಹೀಗೆ ಮಾಡುವುದಿಲ್ಲ. ನೀನು ಮಾತ್ರ ಎಲ್ಲೂ ಹೋಗಬೇಡ. ಇಲ್ಲೇ ಇರು" ಎಂದ.

ತಾಯಿಯು, "ಹೀಗೆಂದಾದರೂ ಆಗಲು ಸಾಧ್ಯವೇಪ್ಪ. ನಿನ್ನ ಸ್ನೇಹಿತರುಗಳೆಲ್ಲಾ ಎಲ್ಲಿ ಹೋದಾರು?" ಎಂದು ವ್ಯಂಗ್ಯ ಸ್ವರದಲ್ಲಿ ಹೇಳಿದರು.

"ಅಮ್ಮಾ ನನಗೆ ಯಾರೂ ಬೇಕಾಗಿಲ್ಲ— ದುಡ್ಡು, ಕಾಸು, ಸ್ನೇಹಿತರು ಯಾರೂ ಬೇಡ. ನೀನೊಬ್ಬಳು ಮಾತ್ರ ಇರು."

"ನಿನ್ನ ಮಾತಿಗೆ ನಂಬಿಕೆ ಏನು?"

"ನಾನಷ್ಟು ಕೆಟ್ಟಮಗನೇನಮ್ಮಾ? ಯಾವಾಗಲಾ ವರೂ ನಾನು ವಿಶ್ವಾಸವಿಡಲಾರದಂತಹ ಕೆಟ್ಟ ಕೆಲಸವನ್ನು ಮಾಡಿದ್ದೇನೆಯೇ? ನೀನು ಇಲ್ಲೇ ಇದ್ದುಕೊಂಡು ಸಂತೋ ಷದಿಂದ ಕೈಯೆತ್ತಿ ಕೊಡುವುದಕ್ಕಿಂತ ಹೆಚ್ಚಾಗಿ ಒಂದು ಕಾಸನ್ನೂ ನಾನು ಕೇಳೋದಿಲ್ಲ."

"ಸಂತೋಷದಿಂದ ನಿನಗೆ ಒಂದು ಕಾಸನ್ನೂ ಕೊಡೋಕೆ ನಾನು ಇಷ್ಟಪಡೋದಿಲ್ಲ. ಏಕೆಂದರೆ ಒಂದೂವರೆ ವರ್ಷ ದಲ್ಲಿ ನೀನು ಎಷ್ಟು ದುಡ್ಡನ್ನು ಹಾಳುಮಾಡಿದ್ದೀಯೋ ಅದರಲ್ಲಿ ಅರ್ಧದಷ್ಟನ್ನೂ ನೀನು ನಿನ್ನ ಜೀವಮಾನದ ಲ್ಲಿಯೇ ಸಂಪಾದಿಸಲಾರೆ."

"ಹಾಗಾದರೆ ನೀನೇನನ್ನೂ ಕೊಡಬೇಡವಮ್ಮಾ"

ತಾಯಿಯ ಹೃದಯವು ಕೋಮಲವಾದದ್ದು. "ನಿನ್ನಿಂದ ಅಷ್ಟು ಸಹಿಸೋಕೆ ಆಗೋಲ್ಲ. ನನಗೂ ಹಾಗೆ ಮಾಡೋಕೆ ಇಷ್ಟವಿಲ್ಲ. ನೂರು ರೂಪಾಯಿಯಲ್ಲಿ ನಿನ್ನ ಒಂದು ತಿಂಗ ಳಿನ ಖರ್ಚುಗಳನ್ನೆಲ್ಲಾ ಮುಗಿಸಬಹುದಲ್ಲ."

"ಸಂತೋಷದಿಂದ."

"ಸರಿ ಹಾಗಾದರೆ."

ಒಂದೆರಡು ದಿನದಲ್ಲೇ ಅವನ ಸ್ನೇಹಿತರುಗಳು ಜಾರಲು ಮೊದಲುಮಾಡಿದರು. ಲಲಿತಮೋಹನನು ಒಂದಿಬ್ಬರನ್ನು ಮನೆಗೆ ಕರೆಯಲು ಹೋದ. "ನಾಳೆ ಬರುತ್ತೇನೆ" ಎಂದೊ

ಬ್ಬನೂ, "ಇವತ್ತು ಕೆಲಸವಿದೆ" ಎಂದಿನ್ನೊಬ್ಬನೂ ಹೇಳಿದರು. ಆದರೆ ಯಾರೂ ಬರಲಿಲ್ಲ.

ಈಗ ಅವನು ಒಬ್ಬಂಟಿಗ. ಒಬ್ಬನೇ ಕುಡಿಯುತ್ತಾನೆ. ಒಬ್ಬನೇ ಅಲೆದಾಡುತ್ತಾನೆ. ಒಂದೊಂದು ಸಲ ಯೋಚಿಸುತ್ತಾನೆ, "ಇನ್ನು ಸಾರಾಯಿ ಕುಡಿಯುವುದಿಲ್ಲ.......ಕಾಲ ಹೇಗೆ ಕಳೆಯಲಿ" ಎಂದು. ಒಬ್ಬನೇ ಸಂತೋಷದಿಂದ ಇರಲಾರದೇ ಹೋದ. ಒಂದು ರಸ್ತೆಯಲ್ಲಿ ಮಾತ್ರ ಅವನು ಬೇಕ್ಕಾಗಿ ತಿರುಗಾಡುತ್ತಾನೆ. ಆ ರಸ್ತೆಯು ಜಗದ್ಬಂಧು ಬಾಬುವಿನ ತೋಟದ ಪಕ್ಕದಲ್ಲಿಯೇ ಹೋಗುತ್ತದೆ. ನಿರ್ಜನವಾದಾಗ, ಸಾರಾಯಿ ಕುಡಿದು ಮತ್ತನಾದಾಗ, ಅಲ್ಲಿ ತಿರುಗಾಡಲು ಅವಕಾಶ ಸಿಕ್ಕರೆ ಬಹಳ ಒಳ್ಳೆಯದು. ಕುಡುಕನಾದಂದಿನಿಂದ ಊರಿನವರೆಲ್ಲರಿಂದಲೂ ಅವಮಾನವಾಗಿತ್ತು. ಆದುದರಿಂದ ಯಾರ ಮನೆಗೆ ಹೋಗಲೂ ಇಷ್ಟವಾಗುತ್ತಿರಲಿಲ್ಲ. ಒಬ್ಬನೇ ಸಾರಾಯಿ ಕುಡಿದು ತನ್ನ ಪಾಡಿಗೆ ತಾನು ಅಲೆದಾಡುತ್ತಿರುತ್ತಿದ್ದ.

ಅವನಿಗಿನ್ನೊಂದು ಜೊತೆ ಸಿಕ್ಕಿತು—ಅನುಪಮೆಯದು. ಹೇಗೆಯೋ ಆ ರಸ್ತೆಯಲ್ಲಿ ಓಡಾಡುತ್ತಿರಲು ತನ್ನಂತೆಯೇ ತೋಟದೊಳಗೆ ತಿರುಗಾಡುತ್ತಿದ್ದ ಅನುಪಮೆಯನ್ನು ಅವನು ನೋಡುತ್ತಿದ್ದನು. ಎಳೆಯತನದಿಂದಲೂ ಅವನು ಅನುಪಮೆಯನ್ನು ನೋಡುತ್ತ ಬಂದಿದ್ದನು. ಆದರೆ ಇಂದು ಅವಳನ್ನು ಒಂದು ಹೊಸ ಭಾವನೆಯಿಂದ ನೋಡುತ್ತಾನೆ

ಜಗದ್ಬಂಧು ಬಾಬುವಿನ ತೋಟದ ಗೋಡೆಯು ಒಂದು ಭಾಗವು ಮುರಿದು ಬಿದ್ದಿದೆ. ಅಲ್ಲಿ ಒಂದು ಮರದ ಬಳಿ

ನಿಂತು ಅವನು ನೋಡುತ್ತಾನೆ—ಅನುಪಮೆಯು ತೋಟ
ದಲ್ಲೆಲ್ಲಾ ಒಂಟಿಯಾಗಿ ಅಲೆದಾಡುವಳು. ಆಗಾಗ್ಗೆ ಮರದ
ಕೆಳಗೆ ಕುಳಿತುಕೊಂಡು ಹೂ ಕಟ್ಟುವಳು. ಕೆಲವು ವೇಳೆ
ಹೂವಾರಿಸುವಳು. ಸರೋವರದ ತಣ್ಣೀರಿನಲ್ಲಿ ಕಾಲುಗ
ಳನ್ನು ಇಳಿಬಿಟ್ಟು ಚೆಲ್ಲಾಟವಾಡುವಳು. ಇವನ್ನು
ನೋಡಲು ಅವನಿಗೆ ತುಂಬ ಇಷ್ಟ—ಕೆದರಿದ ಅವಳ
ಕೂದಲು, ಅವಳ ವೇಷ, ಅತಿಯಾಗಿ ಹೊಳಿವ ಬಿಂದಿ,
ಎಲ್ಲಕ್ಕಿಂತಲೂ ಅವಳ ಚಪಲೆಯ ಮುಖಭಾವ. ಮತ್ತ
ನಾದ ಅವನ ಕಣ್ಣುಗಳಿಗೆ ಅವಳು ಕಮಲ ಪುಷ್ಪದಂತೆ
ಕಾಣುವಳು. ಅನುಪಮೆಯನ್ನು ಸುಮ್ಮನೇ ವೀಕ್ಷಿಸುತ್ತಾ
ನಿಂತಿರುವುದೇ ಪ್ರಪಂಚದಲ್ಲಿ ತನಗೆ ಎಲ್ಲಕ್ಕಿಂತಲೂ ಹೆಚ್ಚು
ಪ್ರಿಯವೆಂದು ಅವನಿಗೆ ಆಗಾಗ್ಗೆ ಅನ್ನಿಸುತ್ತಿತ್ತು. ರಾತ್ರಿ
ಯಾಗುತ್ತಲೇ ಮನೆಯನ್ನು ಸೇರಿ ಮಲಗುತ್ತಿದ್ದ.
ನಿದ್ದೆ ಬರುವವರೆಗೂ ಅವನಿಗೆ ಅನುಪಮೆಯ ಮುಖವಾ
ಡವು ಜ್ಞಾಪಕಕ್ಕೆ ಬರುತ್ತಿತ್ತು. ಸ್ವಪ್ನದಲ್ಲಿಯೂ ಕೂಡ
ಅನುಪಮೆಯ ಅನಿಂದ್ಯ ಸೌಂದರ್ಯಯುತ ಮುಖಮಂಡ
ಲವು ಅವನ ಹೃದಯದ ಕವಾಟವನ್ನು ತೆರೆಯುತ್ತಿತ್ತು.
ಹೀಗೆಯೇ ಕೆಲವುದಿನಗಳು ಕಳೆದುಹೋದವು. ಜಗದ್ಬಂಧು
ಬಾಬುವಿನ ತೋಟದ ಮುಂದಿನ ಗೋಡೆಯ ಹತ್ತಿರ ಸಂಜೆ
ಯಾದ ಒಡನೆಯೇ ಬಂದು ಕುಳಿತುಕೊಳ್ಳುವುದು ಅವನಿಗೆ
ಒಂದು ನಿತ್ಯಕ್ರಿಯೆಯಾಗಿದೆ. ಈಗ ಅವನೇನು ಇನ್ನೂ
ಮಗುವಲ್ಲ. ಕೆಲವೇ ದಿವಸಗಳಲ್ಲಿಯೇ ಸಹಜವಾಗಿಯೇ
ಅವನಿಗೆ ತಿಳಿದುಹೋಯಿತು—ತಾನು ಅನುಪಮೆಯನ್ನು
ಹೆಚ್ಚು ಪ್ರೀತಿಸುತ್ತೇನೆಂದೂ—ಆದರೂ ಇಂತಹ ಪ್ರೀತಿ

ಯಿಂದ ಯಾವ ಲಾಭವೂ ಇಲ್ಲ ಎಂದು. ತಾನು ಕುಡುಕ ನೆಂಪೂ, ಅಯೋಗ್ಯ ಮತ್ತು ಮೂರ್ಖನೆಂದೂ ಎಲ್ಲಕ್ಕಿಂ ತಲೂ ಹೆಚ್ಚಾಗಿ ತುಚ್ಛ ಜೀವಿಯೆಂದೂ ಅನುಪಮೆಗೆ ಯೋ ಗ್ಯನಾದವನು ತಾನೆಂದೆಂದಿಗೂ ಆಗಲಾರನೆಂದೂ, ಎಷ್ಟು ಪ್ರಯತ್ನಪಟ್ಟರೂ ಅನುಪಮೆಯನ್ನು ಹೊಂದುವುದು ಅಸಂ ಭವವೆಂದೂ ಅವನಿಗೆ ಗೊತ್ತಿತ್ತು. ಆದುದರಿಂದ ಈ ರೀತಿ ವ್ಯರ್ಥವಾಗಿ ಮನಸ್ಸನ್ನು ಕೆಡಿಸಿಕೊಳ್ಳುವುದರಿಂದೇನು ಲಾಭ? ನಾಳೆಯಿಂದ ಖಂಡಿತ ಇಲ್ಲಿಗೆ ಬರುವುದಿಲ್ಲ'' ಎಂದು ನಿರ್ಧರಿಸಿಕೊಂಡ. ಆದರೆ ಬರದಿರಲು ಸಾಧ್ಯವಾಗುತ್ತಿರ ಲಿಲ್ಲ. ಸೂರ್ಯಾಸ್ತವಾದೊಡನೆಯೇ ನಾರಾಯಿ ಕುಡಿದು ಆ ಮುರಿದಗೋಡೆಯಮೇಲೆ ಬಂದು ಕೂತುಕೊಳ್ಳುತ್ತಿದ್ದ. ಆದರೆ ಇದರಲ್ಲಿ ಇನ್ನೊಂದು ವಿಶೇಷ. ಯಾರನ್ನಾದರೂ ಪ್ರೇಮಮಾಡಿದರೆ ಅವಳೂ ಅಷ್ಟೇ ಪ್ರೇಮಮಾಡುವಳೋ ಹೇಗೆ ಎಂಬುದು ಗೊತ್ತಾಗುತ್ತೆ. ಏಕೆ ಮಾಡಲಾರಳು? ........ಹೌದು ! ಈ ಮಾತುಗಳಿಗೆ ನಿದರ್ಶನ ಕೊಡಲು ಸಾಧ್ಯವಿಲ್ಲವೆಂಬುದು ನಿಜ.

* * *

ಒಂದು ದಿನ ಲಲಿತಮೋಹನನು ಗೋಡೆಯ ಮೇಲೆ ಕುಳಿತಿದ್ದಾಗ ಅವನ ಕಡೆ ಚಂದ್ರಬಾಬುವಿನ ದೃಷ್ಟಿ ಬಿತ್ತು. ಚಂದ್ರಬಾಬುವು ಕಾವಲುಗಾರನನ್ನು ಕೂಗಿ, "ಹಿಡಿ ಅವ ನನ್ನ........" ಎಂದ. ಕಾವಲುಗಾರನಿಗೆ ಯಾರನ್ನ ಹಿಡಿಯ ಬೇಕೆಂದು ಮೊದಲು ಗೊತ್ತಾಗಲಿಲ್ಲ. ಲಲಿತಮೋಹನನನ್ನು ಹಿಡಿಯಬೇಕೆಂದು ಗೊತ್ತಾದ ಮೇಲೆ ಸಲಾಮು ಮಾಡಿ

ಕೊಂಚ ಹಿಂದೆ ಸರಿದು ನಿಂತುಬಿಟ್ಟ. ಚಂದ್ರಬಾಬುವು ಮತ್ತೆ ಕಿರಚಿ ಹೇಳಿದ, "ಅವನನ್ನ ಠಾಣೆಗೆ ಹಿಡಿದುಕೊಂಡು ನಡೆ" ಎಂದು. ಕಾವಲುಗಾರನು ಬಂಗಾಳೀ ಮಿಶ್ರ ಹಿಂದಿ ಯಲ್ಲಿ, "ಹಾಮಿ ನೇಹಿ ಪಾರಬೆ ಬಾಬು" (ನನ್ನಿಂದ ಆಗದು ಸ್ವಾಮಿ) ಎಂದ. ಅಷ್ಟರಲ್ಲಿ ಲಲಿತಮೋಹನನು ಗೋಡೆ ಯಿಂದಿಳಿದು ಹೊರಟುಹೋದ. ಅವನು ಹೊರಟುಹೋದ ಮೇಲೆ ಚಂದ್ರಬಾಬುವು, "ಅವನನ್ನೇಕೆ ಹಿಡಿಯಲಿಲ್ಲ" ಎಂದು ಕೇಳಿದ. ಕಾವಲುಗಾರನು ಸುಮ್ಮನಿದ್ದನು. ಅಲ್ಲಿಯ ಒಬ್ಬ ಮಾಲಿಗೆ ಲಲಿತನ ವಿಷಯ ಚೆನ್ನಾಗಿ ಗೊತ್ತಿತ್ತು. ಅವನು, "ಈ ಉಂಡಾಡು ಭಟ್ಟರಿಗೆ ಲಲಿತನನ್ನು ಹಿಡಿಯು ವಷ್ಟು ಶಕ್ತಿ ಎಲ್ಲಿದೆ. ಇವನಂತಹ ನಾಲ್ಕು ಜನರನ್ನ ಒಂದೇ ಏಟಿಗೆ ಕೆಡವಿಯಾನು" ಎಂದ. ಕಾವಲುಗಾರನು ಇಲ್ಲವೆನ್ನಲಿಲ್ಲ. "ಸ್ವಾಮಿ ನಾನು ಕೆಲಸಕ್ಕೆ ಬಂದಿದ್ದೇನೆ. ಜೀವಕೊಡಲು ಅಲ್ಲ" ಎಂದನು.

ಚಂದ್ರಬಾಬುವು ಸುಮ್ಮನೇ ಬಿಡುವಂತಹವನಲ್ಲ. ಲಲಿ ತಮೋಹನನಮೇಲೆ ಅವನಿಗೆ ಮೊದಲಿನಿಂದಲೂ ಬಹಳ ಕಿಚ್ಚಿತ್ತು. ಈಗ ಸರಿಯಾದ ಸಮಯ ಸಿಕ್ಕಿತು. ಸಾಕ್ಷಿಗ ಳನ್ನು ಒಟ್ಟುಗೂಡಿಸಿ ಅನಧಿಕಾರ ಪ್ರವೇಶವೇ ಮೊದಲಾದ ಇನ್ನೂ ಏನೇನೋ ಅಪರಾಧಗಳನ್ನು ಹೊರೆಸಿ ದಾವಾ ದಾಖಲೆ ಮಾಡಿದ. ಜಗದ್ಬಂಧು ಬಾಬುವು ಮತ್ತು ಅವರ ಪತ್ನಿಯವರು ಈ ಮೊಕದ್ದಮೆಯನ್ನು ಮಾಡಬೇಡವೆಂದರು. ಆದರೆ ಚಂದ್ರನಾಥ ಬಾಬುವು ಕೇಳಲಿಲ್ಲ. ಮತ್ತು ದುರ್ಮತಿ ಪೀಡಿತಳಾದ ಅನುಪಮೆಯು ಬಹಳ ಹಟತೊಟ್ಟಳು—

ಈ ಪಾಪಿಗೆ ಸಜಾ ಆದ ಹೊರತು ನನ್ನ ಮನಸ್ಸಿಗೆ ಯಾವತರಹದ ಶಾಂತಿಯೂ ದೊರೆಯದು ಎಂದು.

ಇನ್ಸ್ಪೆಕ್ಟರು ಮನೆಗೆ ಬಂದು ಅನುಪಮೆಯ ಹೇಳಿಕೆಯನ್ನು ತೆಗೆದುಕೊಂಡರು. ಅನುಪಮೆಯು ಎಲ್ಲವನ್ನೂ ಸರಿಯಾಗಿ ಹೇಳಿದಳು. ಲಲಿತಮೋಹನನ ತಾಯಿಯು ಬಹಳ ರೂಪಾಯಿಗಳನ್ನು ಖರ್ಚುಮಾಡಿದರೂ ಅವನನ್ನು ಯಾವ ರೀತಿಯಿಂದಲೂ ಉಳಿಸಲು ಸಾಧ್ಯವಾಗಲಿಲ್ಲ. ಲಲಿತಮೋಹನನಿಗೆ ಮೂರು ವರುಷದ ಕಠಿಣ ಸಜವಾಯಿತು.

* * *

ಬಿ. ಎ. ರಿಸಲ್ಟ್ ಬಂತು. ಸುರೇಶನು ಎಲ್ಲರಿಗೂ ಮೊದಲನೆಯವನು. ಊರಿನಲ್ಲೆಲ್ಲಾ ಅವನ ಪ್ರಸಂಸೆಯೇ! ಅನುಪಮೆಯ ತಾಯಿಗೆ ಆನಂದದ ಎಲ್ಲೆ ಮೀರಿತ್ತು. ಆಕೆಯು ಬಹಳ ಸಂತೋಷದಿಂದ ಸುರೇಶನ ತಾಯಿಯ ಬಳಿಗೆ ಹೋಗಿ, "ನಿನ್ನ ಮಾತನ್ನಷ್ಟೇ ಹೇಳಿಕೊಳ್ಳಬೇಡ. ನೋಡು ನನ್ನ ಮಗಳ ಭಾಗ್ಯವನ್ನು" ಎಂದು ಹೇಳಿದರು.

ಸುರೇಶನ ತಾಯಿಯು ನಗುತ್ತಾ "ಅದನ್ನೇ ನೋಡುತ್ತಾ ಇದೇನೆ" ಎಂದರು.

"ಮದುವೆಯಾಗಿ ಬಿಡಲಿ. ಆಗ ನಿನ್ನ ಮಗ ರಾಜನಾಗದಿದ್ದರೆ ಕೇಳು. ಅನು ಹುಟ್ಟಿದಾಗ ಒಬ್ಬ ಜ್ಯೋತಿಷ್ಕನು ಇವಳು ರಾಣಿಯಾಗುತ್ತಾಳೆಂದೂ ಇವಳಷ್ಟು ಸುಖವಾಗಿ ಯಾರೂ ಇರಲಾರರೆಂದೂ ಹೇಳಿದ್ದ."

"ಯಾರು ಹೇಳಿದ್ದರು?"

"ಒಬ್ಬ ಸನ್ಯಾಸಿ ಜ್ಯೋತಿಷ್ಕನು"

"ಹಾಗಾದರೆ ಮೊದಲೇ ನಿನ್ನ ಅಳಿಯನಿಗೊಂದು ಮನೆಯನ್ನು ಕೊಂಡುಕೋ"

"ಏಕಾಗಬಾರದು ? ಖಂಡಿತವಾಗಿಯೂ ಆಗಲಿ. ನಾನು ಮಾತ್ರ ಚಂದ್ರನನ್ನು ನನ್ನ ಹೊಟ್ಟೆಯ ಮಗನೆಂದೇ ತಿಳಿದು ಕೊಂಡಿದ್ದೇನೆ. ಅಲ್ಲದೆ ನನ್ನ ಅನೂಗೆ ಲೆಕ್ಕಾಚಾರವಾಗಿ ತಂದೆಯ ಆಸ್ತಿಯಲ್ಲಿ ಅರ್ಧ ಬರಲೇ ಬೇಕು. ನಾನು ಬದುಕಿದ್ದರಂತೂ ಪಡೆದೇ ಪಡೆಯುತ್ತಾಳೆ."

"ಹಾಗೆಯೇ ಆಗಲಿ. ಅವರಿಬ್ಬರೂ ರಾಜರಾಣಿಯರಾಗಿ ಸುಖವಾಗಿ ಮೆರೆಯಲಿ. ನಾವು ಅವರನ್ನು ನೋಡಿ ಸಾಯೋಣ."

ಎರಡು ದಿನವಾದಮೇಲೆ ರಾಖಾಲ ಮಜೂಂದಾರರು ಮಗನನ್ನು ಕರೆದು, "ಈ ತಿಂಗಳಲ್ಲಿ ನಿನ್ನ ಮದುವೆಗೆ ದಿನ ಚೆನ್ನಾಗಿದೆ" ಎಂದರು.

"ಈಗಲೇ ಮದುವೆಯಾಗಲು ನನಗೆ ಕೊಂಚವೂ ಇಷ್ಟವಿಲ್ಲ."

"ಏತಕ್ಕೆ ?"

"ನನಗೆ ಗಿಲ್‌ಕ್ರಿಷ್ಟ್ ಸ್ಕಾಲರ್‌ಷಿಪ್ ಸಿಕ್ಕಿದೆ. ಇಷ್ಟಪಟ್ಟರೆ ವಿಲಾಯಿತಿಗೆ ಹೋಗಿ ಓದಬಹುದು."

"ನೀನು ವಿಲಾಯತಿಗೆ ಹೋಗುತ್ತೀಯಾ ?"

"ಇಷ್ಟವೇನೋ ಇದೆ"

"ಓದಿ, ಓದಿ ನಿನ್ನ ಬುದ್ಧಿ ಕೆಟ್ಟುಹೋಗಿದೆ. ಇಂತಹ ಮಾತನ್ನ ಮುಂದೆಂದಾದರೂ ಆಡೀಯೆ. ಜೋಕೆ."

"ಖರ್ಚು ಇಲ್ಲದೆ ಸುಸಮಯ ಒದಗಿರುವಾಗ ದೋಷ ವೇನಿದೆ ಇದರಲ್ಲಿ ?"

ರಾಖಾಲಬಾಬುವು ಈ ಮಾತುಗಳಿಂದ ಕೆಂಪೇರಿ, "ಏ! ನಾಸ್ತಿಕ ಶಿಖಾಮಣಿ! ಇದರಲ್ಲಿ ದೋಷವೇನಿದೆ ಎಂದು ಕೇಳುತ್ತೀಯಾ. ಇನ್ನೊಬ್ಬರ ಖರ್ಚಿನಿಂದ ವಿಷ ಸಿಕ್ಕರೆ ಅದನ್ನ ಕುಡಿಯಲು ಸಾಧ್ಯವೇನು ?" ಎಂದರು.

"ಆ ಮಾತಿಗೂ ಈ ಮಾತಿಗೂ ಬಹಳ ವ್ಯತ್ಯಾಸವಿದೆ."

"ವ್ಯತ್ಯಾಸವೆಲ್ಲಿಂದ ಬಂತು? ಒಂದು ಕಡೆ ಜಾತಿಬಿಟ್ಟು ಮ್ಲೇಚ್ಛನಾಗೋದು. ಇನ್ನೊಂದು ಕಡೆ ವಿಷ ತೊಗೊಳ್ಳೋದು. ಎರಡೂ ಒಂದೇ ಅಲ್ಲದೆ ಇನ್ನೇನು? ಕೂದಲೆಳೆಯಷ್ಟೂ ಹೊಂದಲಿಲ್ಲವೇನು ?"

ಸುರೇಶನು ಮತ್ತೆ ಯಾವ ವಿಧವಾದಂತಹ ಪ್ರತಿವಾದ ವನ್ನೂ ಮಾಡದೆ ಸುಮ್ಮನೆ ಹೊರಟುಹೋದನು. ಅವನು ಹೊರಟು ಹೋದಮೇಲೆ ರಾಖಾಲ ಬಾಬುವು ನಗುತ್ತಾ ತಮ್ಮಲ್ಲಿಯೇ, "ಹುಡುಗ, ನಾಲ್ಕಾರು ಇಂಗ್ಲೀಷ್ ಅಕ್ಷರ ಕಲಿತಿದ್ದಕ್ಕೆ ನಮ್ಮಂತವರೊಡನೆ ವಾದಿಸೋಕೆ ತಯಾರಿದ್ದಾನೆ—ಅಲ್ಲಾ, ಎಂತಹ ಮಾತನ್ನು ತಿಳಿಯ ಹೇಳಿದೆ—ಇನ್ನೊಬ್ಬರ ಖರ್ಚಿನಿಂದ ವಿಷ ಸಿಕ್ಕರೆ ಅದನ್ನ ಕುಡಿಯಲು ಸಾಧ್ಯವೆ? ಹುಡುಗನ ಬಾಯಿಂದ ಒಂದು ಮಾತೂ ಸಹ ಹೊರಡಲಿಲ್ಲ. ಇಂತಹ ಮೀರಿಸಲಾರದ ಯುಕ್ತಿಚಾತುರ್ಯ ವನ್ನು ಯಾರು ಮೀರಿಸಿಯಾರು?" ಎಂದು ಹೇಳಿಕೊಂಡರು.

ವಿವಾಹದ ವಿಷಯವಾಗಿ ಎಲ್ಲವೂ ನಿಶ್ಚಯವಾದ ಮೇಲೆ ದೊಡ್ಡ ಸೊಸೆಯು ಅನುಪಮೆಯೊಡನೆ ಹೇಳಿದಳು, "ನಿನ್ನ

ಗಂಡನಿಗೆ ಸಮನಾದ ಹೆಸರುಳ್ಳವನು ಈ ಊರಿನಲ್ಲಿ ಯಾರೂ ಇಲ್ಲ" ಎಂದು.

ಅನುಪಮೆಯು ಮಂದಸ್ಮಿತ ಮುಗುಳು ನಗೆಯಿಂದ, "ಯಾರಿಗೆ ಸತೀ ಸಾಧ್ವಿಯೆನಿಸಿದ ಹೆಂಡತಿಯಿರುತ್ತಾಳೋ ಅವರಿಗೆ ಪ್ರಪಂಚದ ಎಲ್ಲಾ ಸುಖದ ಬಾಗಿಲುಗಳೂ ತೆರೆದೇ ಇರುತ್ತವೆ" ಎಂದು ಹೇಳಿದಳು.

"ಆದರೆ ನಿನ್ನ ಮದುವೆಯಿನ್ನೂ ಆಗಲಿಲ್ಲವಲ್ಲ ಲಿಲ್ಲೀ!"

"ನಮ್ಮಗಳ ಮದುವೆಯು ಬಹಳ ದಿನಗಳ ಹಿಂದೆಯೇ ಆಗಿಹೋಗಿದೆ. ಈ ಪ್ರಪಂಚಕ್ಕದು ಗೊತ್ತಿಲ್ಲವಾದರೂ ಒಳ ಗೊಳಗೇ ನಮ್ಮಿಬ್ಬರ ಹೃದಯಗಳ ಪೂರ್ಣ ಮಿಲನವು ಬಹಳ ದಿನಗಳ ಹಿಂದೆಯೇ ಆಗಿಹೋಗಿದೆ."

ದೊಡ್ಡ ಸೊಸೆಯು ಕೊಂಚ ನಕ್ಕಳು. ತುಟಿಗಳನ್ನು ಕೊಂಚ ಬಿಗಿ ಹಿಡಿದು, ಕೊಂಚ ತಡೆದು ಆಮೇಲೆ "ಈ ಮಾತುಗಳನ್ನು ಮತ್ತೆಲ್ಲಿಯೂ ಹೇಳುತ್ತ ಕೂಡಬೇಡ. ನನ ಗಾಗಲೇ ಅರ್ಧ ಮುಪ್ಪಿನ ವಯಸ್ಸು—ಹೇಳೋಕೆ ಹಾಗಿ ರಲಿ ಇಂತಹ ಮಾತುಗಳನ್ನ ಕೇಳೋಕೆ ನನಗೇ ನಾಚಿಕೆ ಯಾಗುತ್ತೆ. ನೀನು ಎಲ್ಲಾ ಮಾತುಗಳನ್ನೂ ನಾಟಕ ಗಳಲ್ಲಿನ ಪಾತ್ರಧಾರಿಗಳಂತೆ ಆಡುತ್ತಿ. ಹೀಗೆ ಮಾಡೋದ ರಿಂದ ಜನರು ಹುಚ್ಚಿ ಎನ್ನುತ್ತಾರೆ" ಎಂದಳು.

"ನನಗೆ ಪ್ರೇಮದ ಹುಚ್ಚು!"

---

—೩—

ಇಂದು ವೈಶಾಖ ಶುದ್ಧ ಪಂಚಮಿ. ಅನುಪಮೆಯ ವಿವಾಹೋತ್ಸವದ ಸಲುವಾಗಿ ಊರಲ್ಲೆಲ್ಲಾ ವೈಭವವು ತುಂಬಿದೆ. ಜಗದ್ಬಂಧು ಬಾಬುವಿನ ಮನೆಯು ಇಂದು ಕಿಕ್ಕಿರಿದು ತುಂಬಿದೆ.

ಒಂದು ಕಡೆ ಊಟ ಉಪಚಾರದ ವೈಶಾಲ್ಯ. ಇನ್ನೊಂದು ಕಡೆ ಸಂಗೀತದ ಇಂಪು. ಸಂಜೆಯು ಸಮೀಪಿಸಿದ ಹಾಗೆಲ್ಲಾ ಗಲಾಟೆಯು ಹೆಚ್ಚಾಗತೊಡಗಿತು. ಗೋಧೂಳೀ ಸಮಯವಾದ ಮೇಲೆ ಮದುವೆ. ವರನು ಬರುತ್ತಿರಬಹುದು ! ಎಲ್ಲರೂ ಉತ್ಸಾಹ ಆತುರಗಳಿಂದ ಕಾದಿದ್ದಾರೆ—ಆದರೆ ವರನೆಲ್ಲಿ? ರಾಖಾಲಬಾಬು ಅವರ ಮನೆಯಲ್ಲಿ ಸಂಜೆಗೆ ಮುಂಚೆಯಿಂದ, "ಸುರೇಶನೆಲ್ಲಿ ಹೋದ? ಇಲ್ಲಿ ಹುಡುಕಿ, ಅಲ್ಲಿ ಹುಡುಕಿ; ಇಲ್ಲಿ ನೋಡಿ ಅಲ್ಲಿ ನೋಡಿ" ಎಂದು ಬಹಳ ಗಲಭೆ ಎದ್ದಿದೆ. ಆದರೂ ಸುರೇಶನನ್ನು ಹುಡುಕಲು ಯಾರಿಗೂ ಸಾಧ್ಯವಾಗಲಿಲ್ಲ. ಕೆಟ್ಟ ಸಮಾಚಾರಗಳು ಹರಡಲು ಬಹಳ ಹೊತ್ತು ಹಿಡಿಯುವುದಿಲ್ಲ; – ಮಿಂಚಿನಂತೆ ಹಾರಿಬಂದು ಜಗದ್ಬಂಧು ಬಾಬುವು ಅವರ ಮನೆ ಮುಟ್ಟಿತು. ಮನೆಯಲ್ಲಿದ್ದವರೆಲ್ಲರೂ ಸೊಂಟದಮೇಲೆ ಕೈಯಿಟ್ಟುಕೊಂಡು ಕುಳಿತುಬಿಟ್ಟರು. ಆ, ಏಕೆ ಹೀಗಾಯಿತು?

ಎಂಟು ಘಂಟೆಗೆ ಮುಹೂರ್ತ. ಆದರೆ ಆಗ ಒಂಬತ್ತು ಬಾರಿಸುತ್ತಿತ್ತು. ಎಲ್ಲೂ ವರನ ಪತ್ತೆ ಆಗಲಿಲ್ಲ. ಜಗದ್ಬಂಧು ಬಾಬುವು ತಲೆಕೆರೆದುಕೊಳ್ಳುತ್ತಾ ಇಲ್ಲಿಂದಲ್ಲಿಗೆ ಅಲ್ಲಿಂದಿಲ್ಲಿಗೆ

ಓಡಲು ಮೊದಲುಮಾಡಿದರು. ಅನುಪಮೆಯ ತಾಯಿಯು ಅಳುತ್ತಾ ಅವರ ಬಳಿಗೆ ಬಂದು, "ಈಗೇನು ಮಾಡೋದೋಂದ್ರೆ" ಎಂದರು. ಜಗದ್ಬಂಧು ಬಾಬುವು ಆಗಲೇ ಅರ್ಧ ಹುಚ್ಚಾಗಿದ್ದರು. ಕಿರಿಚಿದರು, "ಮಾಡೋದು ನನ್ನ ಶ್ರಾದ್ಧ ನನ್ನ—ಇನ್ನೇನು ಮಾಡೋದು. ಈ ಅಭಾಗಿನಿ ಹುಡುಗಿಗಾಗಿ ಮುದಿತನದಲ್ಲಿ ನನ್ನ ಮಾನಹೋಯಿತು. ಮರ್ಯಾದೆ ಹೋಯಿತು; ಜಾತಿಹೋಯಿತು; ನನ್ನದೆಲ್ಲಾ ಹೋಯಿತು. ಈಗ ಜಾತಿಬಾಹಿರನಾಗಿರಬೇಕಾಗುತ್ತೆ. ನಾನು ನನ್ನ ಸರ್ವನಾಶ ಮಾಡಿಕೊಳ್ಳೋಕೆ ನನ್ನ ಮುದಿತನದಲ್ಲಿ ನಿನ್ನನ್ನು ಲಗ್ನ ಮಾಡೆ. ನಿನ್ನಿಂದಲೇ ನನಗೆ ಇವತ್ತು ಈ ಅಪಮಾನವಾಗುತ್ತಾ ಇದೆ. ಶಾಸ್ತ್ರದಲ್ಲಿ ಇಷ್ಟಲ್ಲದೆ ಬರೆದಿದ್ದಾರೆಯೇ, 'ಸ್ತ್ರೀ ಬುದ್ಧಿ ಪ್ರಳಯಾಂತಕಃ' ಎಂದು. ನಿನ್ನ ಮಾತಿಗೋಸ್ಕರ ನನ್ನ ತಲೆಯ ಮೇಲೆ ನಾನೇ ಕಲ್ಲೆಳೆದುಕೊಂಡೆ. ಹೋಗು, ನಿನ್ನ ಮಗಳೊಡನೆ ನನ್ನೆದುರಿನಿಂದ ದೂರವಾಗಿ ಹೊರಟುಹೋಗು" ಎಂದು.

ಅಯ್ಯೋ ಪಾಪ! ಅನುಪಮೆಯ ತಾಯಿಯ ದುಃಖದ ವರ್ಣನೆ ಮಾಡಲು ಸಾಧ್ಯವಿಲ್ಲ. ಇಲ್ಲಿ ಈ ಪರಿಸ್ಥಿತಿ ಇದ್ದರೆ ಅಲ್ಲಿ ಬೇರೊಂದು ಆಪತ್ತು. ಅನುಪಮೆಗೆ ಸಲಸಲಕ್ಕೂ ಮೂರ್ಛೆ ಬರುತ್ತಿದೆ.

ರಾತ್ರಿಯು ಹೆಚ್ಚುತ್ತಲೇ ಹೋಗುತ್ತಿದೆ. ಹನ್ನೊಂದು, ಹನ್ನೆರಡು ಹೀಗೆಯೇ ಕ್ರಮವಾಗಿ ಒಂದು, ಎರಡು ಕೂಡ ಬಡಿದುಹೋಯಿತು. ಆದರೆ ಸುರೇಶನ ಪತ್ತೆ ಮಾತ್ರ ಇಲ್ಲ.

ಸುರೇಶನು ಸಿಕ್ಕಲಿ ಸಿಕ್ಕದಿರಲಿ ಅನುಪಮೆಯ ಮದುವೆಯಂತೂ ಆಗಲೇ ಬೇಕಾಗಿದೆ. ಆ ರಾತ್ರಿಯೇ ಮದುವೆ

ಯಾಗದಿದ್ದರೆ ಜಗದ್ಬಂಧು ಬಾಬು ಅವರ ಜಾತಿ ಹೋಗುತ್ತದೆ.

ರಾತ್ರಿ ಮೂರು ಘಂಟೆಯ ಸಮಯ. ಬಡಾವಣೆಯ ಐದು ಪಂಚಾಯತಿದಾರರು—ಜಗದ್ಬಂಧು ಬಾಬು ಅವರ ಹಿತ ಬಯಸುವ ಮಿತ್ರರು—ಸೇರಿ ಗೂರಲು ರೋಗದಿಂದ ಪೀಡಿತನಾದ ಐವತ್ತು ವಯಸ್ಸಿನ ಮುದುಕ ರಾಮದುಲಾಲದತ್ತನನ್ನು ಕರೆತಂದು ವರನ ವೇಷದಲ್ಲಿ ನಿಲ್ಲಿಸಿದರು.

ಯಾವಾಗ ಅನುಪಮೆಯು ತನ್ನ ಜೀವಿತವೇ ನಷ್ಟವಾಗುವ ಈ ಸಮಾಚಾರವನ್ನು ಕೇಳಿದಳೋ ಆಗ ಮೂರ್ಛೆಯಿಂದೆದ್ದವಳು, ತಾಯಿಯ ಕಾಲುಗಳಮೇಲೆ ಹೊರಳಾಡುತ್ತಾ, ''ಅಯ್ಯೋ, ಅಮ್ಮಾ, ನನ್ನನ್ನು ಕಾಪಾಡು. ಈ ರೀತಿ ನನ್ನ ಕತ್ತನ್ನು ಕೊಯ್ಯಬೇಡ. ಈ ಮದುವೆ ನಡೆದಲ್ಲಿ ನಾನು ಖಂಡಿತ ಪ್ರಾಣಕಳೆದುಕೊಳ್ಳುತ್ತೇನೆಂದು ತಿಳಿದುಕೋ" ಎಂದು ಹೇಳಿದಳು.

ತಾಯಿಯು ಅಳುತ್ತಾ, " ನಾನೇನು ಮಾಡಲಮ್ಮಾ" ಎಂದರು. ಬಾಯಿಂದ ಬೇಕಾದುದನ್ನು ಹೇಳಲಿ. ಆದರೆ ಹುಡುಗಿಯ ದುಃಖ ಮತ್ತು ಆತ್ಮಗ್ಲಾನಿಯಿಂದ ಆಕೆಯ ಹೃದಯವು ಉರಿದು ಬೇಯಲು ಮೊದಲಾಯಿತು. ಇದರಿಂದ ಅಳುತ್ತಾ, ಕುದಿಯುತ್ತಾ ಪುನಃ ಆಕೆಯು ಪತಿಯ ಬಳಿಗೆ ಹೋದರು. ''ಕೇಳುತ್ತೀರಾ ಈಗಲಾದರೂ, ಸ್ವಲ್ಪ ಯೋಚನೆಮಾಡಿ—ಪರಿಣಾಮವೇನಾದೀತು— ಈ ಮದುವೆಯಾದದ್ದೇ ಆದರೆ ನನ್ನ ಹುಡುಗಿಯು ವಿಷನುಂಗಿ ಪ್ರಾಣಬಿಡುವಳು'' ಎಂದು ಹೇಳಿದರು. ಜಗದ್ಬಂಧು ಬಾಬುವು

ಯಾವ ಉತ್ತರವನ್ನೂ ಕೊಡದೆ, ಸೀದಾ ಅನುಪಮೆಯ ಬಳಿ ಸಾರಿ ಗಂಭೀರವಾಗಿ, "ಏಳು ಬೆಳಗಾಗುತ್ತಿದೆ" ಎಂದರು.

"ಎಲ್ಲಿ ಹೋಗಲಿ ಅಪ್ಪಾ ?"

"ಈಗಲೇ ಕನ್ಯಾದಾನವಾಗಬೇಕಾಗಿದೆ"

ಅನುಪಮೆಯು ರೋದಿಸತೊಡಗಿದಳು. "ಅಪ್ಪಾ ನನ್ನನ್ನು ಕೊಂದುಬಿಡು - ಇಲ್ಲವೇ ವಿಷ ನುಂಗಿಬಿಡುತ್ತೇನೆ".

"ಮನಸ್ಸಿಗೆ ಬಂದರೆ ನಾಳೆ ನುಂಗುವಿಯಂತೆ. ಇವತ್ತು ನಿನ್ನ ವಿವಾಹವಾಗುವುದನ್ನು ನೋಡಿ ನನ್ನ ಜಾತಿಯನ್ನು ಉಳಿಸಿಕೊಳ್ಳುತ್ತೇನೆ. ಆಮೇಲೆ ಮನಸ್ಸಿಗೆ ಬಂದದ್ದನ್ನು ಮಾಡು—ವಿಷ ನುಂಗು, ಇಲ್ಲವೇ ಬಾವಿಯಲ್ಲಿ ಬೀಳು, ನಾನೊಂದಕ್ಕೂ ಅಡ್ಡಿ ಬರೋದಿಲ್ಲ".

ಎಂತಹ ಕಠೋರವಾದ ನುಡಿಗಳಿವು. ಈಗ ನಿಜವಾಗಿಯೂ ಅನುಪಮೆಯ ಹೃದಯವು ಕಂಪಿಸತೊಡಗಿತು. "ಅಪ್ಪಾ, ನನ್ನನ್ನು ರಕ್ಷಿಸು" ಎಂದು ಅಂಗಲಾಚಿದಳು, ಬಹಳ ಅತ್ತು ಕರೆದು ಬೇಡಿದಳು. ಆದರೂ ಏನೂ ಸಫಲವಾಗಲಿಲ್ಲ. ದೃಢ ಪ್ರತಿಜ್ಞೆಯ ಜಗದ್ಬಂಧು ಬಾಬುವು ರಾಮದುಲಾಲ ದತ್ತನೊಡನೆ ಅನುಪಮೆಯ ವಿವಾಹವನ್ನು ಅದೇ ರಾತ್ರಿಯೇ ಮಾಡಿಬಿಟ್ಟರು.

ಬಹು ದಿನಗಳಿಂದ ಪತ್ನೀವಿಹೀನನಾಗಿದ್ದ ವೃದ್ಧ ರಾಮದುಲಾಲನಿಗೆ ತನ್ನವರೆಂದು ಹೇಳಿಕೊಳ್ಳಲು ಯಾರೂ ಇರಲಿಲ್ಲ. ಇಟ್ಟಿಗೆಗಳಿಂದ ಕಟ್ಟಲ್ಪಟ್ಟಿದ್ದ ಹಳೆಯ ಎರಡು ಮನೆಗಳು ಮತ್ತು ತರಕಾರಿ ಬೆಳೆಯಲು ಕೊಂಚ ಭೂಮಿ

ಇಷ್ಟೇ ದತ್ತಮಹಾಶಯನ ಸಂಪತ್ತುಗಳಾಗಿದ್ದವು. ಅವನು ಬಹಳ ಕಷ್ಟದಿಂದ ದಿನಗಳನ್ನು ಕಳೆಯುತ್ತಿದ್ದನು. ಮದುವೆ ಯಾದ ಮೂರನೇ ದಿನವೇ ಅವನು ಅನುಪಮೆಯನ್ನು ತನ್ನ ಮನೆಗೆ ಕರೆದೊಯ್ದನು. ಜೊತೆಯಲ್ಲೇ ಬೇಕಾದಷ್ಟು ಊಟ ಉಡಿಗೆ ಸಾಮಾನುಗಳು ಬಂದವು; ದಾಸ ದಾಸಿ ಯರು ಬಂದರು; ಯಾವ ತೊಂದರೆಯೂ ಇಲ್ಲದೆ ಐದಾರು ದಿನಗಳು ಸುಖವಾಗಿ ಕಳೆದವು. ಮಾವನವರು ದೊಡ್ಡ ಮನುಷ್ಯರು— ಈಗ ಅವನಿಗೆ ಯಾವ ಚಿಂತೆಯೂ ಇಲ್ಲ. ಮದುವೆಯಾದದ್ದೇ ತಡ ಅವನ ಅದೃಷ್ಟ ಬದಲಾಯಿಸಿ ಹೋಯಿತು. ಆದರೆ ಅನುಪಮೆಯ ವಿಚಾರ ಬೇರೆ. ಇನ್ನೊಂದೆರಡು ದಿನ ಅಲ್ಲಿ ಇದ್ದು ಅವಳು ತವರು ಮನೆಗೆ ಹೋದಳು. ಆಗ ಅವಳ ಚಹರೆಯನ್ನು ನೋಡಿ ದಾಸದಾಸಿಯರು ಸುಮ್ಮನೆ ಕಣ್ಣೀರಿಟ್ಟರು.

ಮನೆಗೆ ಹಿಂದಿರುಗಿ ಪ್ರಾಣ ಬಿಡುತ್ತೇನೆಂದು ಅವಳು ಮಾವನ ಮನೆಯಲ್ಲೇ ನಿರ್ಧರಿಸಿಕೊಂಡಿದ್ದಳು. ಈಗ ಅವಳು ಖಂಡಿತವಾಗಿಯೂ ಸಾಯಲು ಇಚ್ಛಿಸುತ್ತಾಳೆ. ರಾತ್ರಿ ಬಹಳ ವೇಳೆ ಕಳೆದಮೇಲೆ, ಮನೆಯವರೆಲ್ಲರೂ ನಿದ್ದೆ ಮಾಡುತ್ತಿದ್ದಾಗ ಅವಳು ಸದ್ದಿಲ್ಲದೆ ಎದ್ದು ಹಿಂದಿಲ ಬಾಗಿಲಿ ನಿಂದ ತೋಟದ ಸರೋವರದ ಮೆಟ್ಟಲುಗಳಮೇಲೆ ಹೋಗಿ ಕುಳಿತುಕೊಂಡಳು. ಅವಳು ಇಂದು ಸಾಯಲೇ ಬೇಕು— ಬರೀ ಬಾಯಿ ಮಾತಲ್ಲ; ನಿಶ್ಚಯವಾಗಿಯೂ ಸಾಯಲೇ ಬೇಕು. ಅನುಪಮೆಗೆ ಜ್ಞಾಪಕವಾಯಿತು - "ಹಿಂದೊಂದು ದಿನ ನಾನು ಸಾಯಲು ಇಲ್ಲಿಗೇ ಬಂದಿದ್ದೆ. ಅದೂ ಬಹಳ ದಿನದ ಮಾತಲ್ಲ. ಆದರೆ ಆಗ ಸಾಯಲು ಸಾಧ್ಯವಾಗ

ಲಿಲ್ಲ. ಏಕೆಂದರೆ ಆಗ ಒಬ್ಬ ಮನುಷ್ಯನು ಬಂದು ನನ್ನನ್ನು ಹಿಡಿದ. ಅವನು ಇವತ್ತು ಎಲ್ಲಿದ್ದಾನೆ? ಜೈಲಿನಲ್ಲಿ ಸಜ ಅನುಭವಿಸುತ್ತಿದ್ದಾನೆ. ಯಾವ ಕಾರಣದಿಂದ? ನಿನ್ನನ್ನು ನಾನು ಪ್ರೇಮಮಾಡುತ್ತೇನೆಂದಿಷ್ಟನ್ನು ಹೇಳಲು ಅವನು ಬಂದಿದ್ದ. ಅವನನ್ನು ಜೈಲಿಗೆ ಹಾಕಿಸಿದ್ದು ಯಾರು? ಚಂದ್ರಬಾಬು. ಏತಕ್ಕೆ? ಅವನ ವಕ್ರ ದೃಷ್ಟಿಗೆ ನೋಡುವ ಚೈತನ್ಯವಿರಲಿಲ್ಲ; ಅವನು ಕುಡುಕನಾಗಿದ್ದ; ಅವನು ಅತಿಕ್ರಮ ಪ್ರವೇಶ ಮಾಡಿದ್ದ. ಆದರೆ ನಾನು ಅವನನ್ನು ರಕ್ಷಿಸಲು ಸಾಧ್ಯವಿರಲಿಲ್ಲವೇ? ರಕ್ಷಿಸಲು ಸಾಧ್ಯವಿತ್ತು. ಆದರೆ ನಾನು ಅದನ್ನು ಮಾಡಲಿಲ್ಲ. ಅವನನ್ನು ಜೈಲಿಗೆ ಕಳುಹಿಸಲು ಸಹಾಯಮಾಡಿದೆ" ಇವತ್ತು ಅವಳು ಯೋಚಿಸತೊಡಗಿದಳು, "ಲಲಿತನು ನಿಜವಾಗಿಯೂ ನನ್ನನ್ನು ಪ್ರೇಮಮಾಡುತ್ತಾನೆಯೇ? ಮಾಡುತ್ತಾನೆಂಬುದು ಸಾಧ್ಯವಿದೆ. ಒಂದು ವೇಳೆ ಮಾಡದಿದ್ದರೋ? ಇಲ್ಲ. ಮತ್ತೆ ಅವನನ್ನು ಜೈಲಿಗೆ ಹಾಕಿಸಿದ್ದರಿಂದ ನನಗೇನು ಲಾಭ ಬಂತು. ನನ್ನ ಯಾವ ಇಷ್ಟಾರ್ಥ ಸಿದ್ಧಿಸಿತು. ಜೈಲಿನಲ್ಲಿ ಅವನು ಕಲ್ಲನ್ನು ಒಡೆಯುತ್ತಾನೆ. ಗಾಣ ತಿರುಗಿಸುತ್ತಾನೆ. ಇನ್ನೂ ಯಾವ ಯಾವ ನೀಚ ಕೆಲಸವನ್ನು ಮಾಡುತ್ತಿರುವನೋ ಯಾರು ಬಲ್ಲರು? ಇದರಿಂದ ಚಂದ್ರಬಾಬುವಿಗೆ ಕೊಂಚ ಲಾಭವಾಗಿದ್ದರೆ ಆಗಿರಬಹುದು. ನನಗೇನು ಲಾಭವಾಯಿತು? ಅವನಿಗೆ ಸಜಾ ಆಗದೆ ಇದ್ದಿದ್ದರೆ ಇಂದು ಆನಂದದಿಂದ ಜಹಜಿನಲ್ಲಿ ವಿಲಾಯಿತಿಗೆ ಹೋಗುತ್ತಿರುವ ಅವರನ್ನು ಹೊಂದುತ್ತಿದ್ದೆನೇ?"

ಅನುಪಮೆಯು ಅಲ್ಲೇ ಬಹಳ ಹೊತ್ತು ಕುಳಿತುಕೊಂಡು ಅಳುತ್ತಿದ್ದಳು. ಮತ್ತೆ ನೀರಿನಲ್ಲಿ ಇಳಿದಳು. ಮೊಣಕಾಲಿನ ವರೆಗೆ; ಎದೆಯವರೆಗೆ, ಕತ್ತಿನವರೆಗೆ ಹಾಗೆಯೇ ಪೂರ್ತಿ ನೀರಿನೊಳಗೆ ಮುಳುಗಿದಳು. ಒಂದರ್ಧ ನಿಮಿಷ ನೀರಿನಲ್ಲಿ ಮುಳುಗಿದ್ದುದರಿಂದ ಬಹಳ ನೀರು ಹೊಟ್ಟೆಗೆ ಹೋಯಿತು ಮತ್ತು ಅವಳು ಕೂಡಲೇ ಮೇಲೆ ಹಾರಿ ಬಂದಳು. ಮತ್ತೆ ಮುಳುಗಿದಳು ಕೂಡಲೇ ಮೇಲೆ ಹಾರಿ ಬಂದಳು. ಅವಳಿಗೆ ಈಜು ಬರುತ್ತಿತ್ತು. ಇದರಿಂದ ಕೊಳವನ್ನೆಲ್ಲಾ ಹುಡುಕಿ ದರೂ ಮುಳುಗಿ ಹೋಗಲು ಸರಿಯಾದ ಸ್ಥಳವು ಅವಳಿಗೆ ಸಿಕ್ಕಲೇ ಇಲ್ಲ. ಅವಳು ಬಹಳ ಸಲ ಮುಳುಗಲು ಪ್ರಯತ್ನಿಸಿ ದಳು. ಅದರಿಂದ ನೀರು ಹೆಚ್ಚಾಗಿ ಹೊಟ್ಟೆಗೆ ಸೇರಿ ಬಿಟ್ಟಿತ್ತು. ಆದರೆ ಯಾವ ರೀತಿಯಿಂದಲೂ ಒಂದೇ ಸಲ ಮುಳುಗಿ ಹೋಗಲು ಸಾಧ್ಯವಾಗಲಿಲ್ಲ. ಸಾಯಲೇ ಬೇಕೆಂದು ನಿರ್ಧರಿಸಿದ್ದರೂ ಮುಳುಗಿದೊಡನೆಯೇ ಉಸಿರು ಕಟ್ಟುವುದೆಂದೂ ಮತ್ತೆ ಉಸಿರು ತೆಗೆದುಕೊಳ್ಳಲು ಮೇಲೆ ಹಾರಿ ಬರಬೇಕಾಗುವುದೆಂದೂ ಅವಳು ತಿಳಿದಳು. ಈ ರೀತಿ ಕೊಳದಲ್ಲೆಲ್ಲಾ ಈಜಿ ಮುಳುಗಿ ಪಾಡು ಬಿದ್ದೇಳು ವುದರಲ್ಲಿ ರಾತ್ರಿ ಕಳೆದುಹೋಗಲು ಕೊಂಚ ಹೊತ್ತು ಇತ್ತು. ಆಗ ಅವಳು ತನ್ನ ಬಹಳ ಆಯಾಸ ಹೊಂದಿದ ನಿರ್ಜೀವ ಸಮನಾದ ದೇಹವನ್ನು ಹೇಗೆಯೋ ಪ್ರಯತ್ನಿಸಿ ಮೆಟ್ಟಿಲು ಗಳ ಮೇಲೆ ಎಳೆದುಕೊಂಡು ಬಂದಳು. "ಯಾವ ಸ್ಥಿತಿ ಯಾಗವಲ್ಲದೇಕೆ, ಯಾವ ಕಾರಣ ಆಗವಲ್ಲದೇಕೆ, ಈ ರೀತಿ ಯಲ್ಲಿ ಸ್ವಲ್ಪ ಸ್ವಲ್ಪವಾಗಿ ಪ್ರಾಣ ತೆಗೆದುಕೊಳ್ಳುವುದು ಸುಲಭ ಸಾಧ್ಯವಾದದ್ದಲ್ಲ" ಎಂದು ಆಗ ಅವಳಿಗೆ ಕಂಡು

ಬಂತು. ಮೊದಲು ಅವಳು ವಿರಹ ವ್ಯಥೆಯಿಂದ ಝುರ್ಝುರಿತ ಳಾಗಿ ದಿನಕ್ಕೆ ನೂರು ಬಾರಿ ಸಾಯಲು ಇಚ್ಛಿಸುತ್ತಿದ್ದಳು. ಪ್ರಾಣ ಬಿಡುವುದು ಇಟ್ಟುಕೊಳ್ಳುವುದು ನಾಯಕ ನಾಯಕಿ ಯರ ಕೈಯಲ್ಲೇ ಇದೆಯೆಂದು ಅವಳು ತಿಳಿದಿದ್ದಳು. ಆದರೆ ಇಂದು ರಾತ್ರಿಯೆಲ್ಲಾ ಪ್ರಾಣದೊಡನೆ ಬಲವಾಗಿ ಹೋರಾಡಿದರೂ ಅದನ್ನು ಕಿತ್ತು ಬಿಸಾಡಲು ಸಾಧ್ಯವಾಗಿಲ್ಲ. ಇಂದು ಅವಳು ತನ್ನ ಹನ್ನೊಂದು ವರ್ಷ ವಿರಹ ವ್ಯಥೆಯಿ ದ್ದರೂ ಯಾವತ್ತಿಗೂ ಪ್ರಾಣಬಿಡಲು ಸಾಧ್ಯವಿಲ್ಲವೆಂದು ತಿಳಿದುಕೊಂಡಳು.

ಬೆಳಗಾಗುವುದಕ್ಕೆ ಮುಂಚೆ ಅವಳು ಮನೆಗೆ ಬಂದಾಗ ಶರೀರವು ಆದ್ಯಂತವಾಗಿ ಕಂಪಿಸುತ್ತಿತ್ತು. "ಇಷ್ಟು ಬೇಗಾ ಗಲೇ ಎದ್ದು ಸ್ನಾನಮಾಡಿ ಬಂದೆಯಾ ಅನು" ಎಂದು ತಾಯಿಯು ಕೇಳಿದರು. ಅನುಪಮೆಯು ತಲೆಯಲ್ಲಾಡಿಸಿ, "ಹೂ" ಎಂದಳು.

ಇತ್ತಲಾಗಿ ದತ್ತಮಹಾಶಯನು ಮಾವನ ಮನೆಯಲ್ಲೇ ಒಂದು ರೀತಿಯಿಂದ ಶಾಶ್ವತವಾದ ಝಾಂಡಾ ಹಾಕಿಬಿಟ್ಟಿ ದ್ದಾನೆ. ಮೊದ ಮೊದಲು ಕೆಲವು ದಿನಗಳವರೆಗೆ ಅಳಿಯ ನಿಗಾಗಬೇಕಾದ ಆದರ ಸತ್ಕಾರಗಳು ಆಗುತ್ತಿದ್ದುವು. ಆದರೆ ಈಗ ಕ್ರಮೇಣ ಕಮ್ಮಿ ಆಗುತ್ತಾ ಇದೆ. ಮನೆಯವ ರಿಗಾರಿಗೂ ಅವನನ್ನು ಕಂಡರೆ ಸೈರಣೆ ಇಲ್ಲ. ಚಂದ್ರ ಬಾಬುವು ಪ್ರತಿ ಮಾತಿನಲ್ಲಿಯೂ ಅವನನ್ನು ತಮಾಷೆ ಮಾಡುತ್ತಾನೆ. ಮಾತು ಮಾತಿನಲ್ಲಿಯೂ ನೋಯಿಸು ತ್ತಾನೆ. ಎಲ್ಲಾ ರೀತಿಯಲ್ಲೂ ಅವನನ್ನು ಲಾಂಛಿತನನ್ನಾ ಗಿಯೂ ಮತ್ತು ಅಪಮಾನಿತನನ್ನಾಗಿಯೂ ಮಾಡುತ್ತಾನೆ.

ಇದಕ್ಕೊಂದು ಕಾರಣವೂ ಇತ್ತು. ಚಂದ್ರಬಾಬುವು ಮೊದಲಿನಿಂದಲೂ ಹೊಟ್ಟೆಕಿಚ್ಚಿನ ಸ್ವಭಾವದವನು. ಅಲ್ಲದೆ ಜಗದ್ಬಂಧು ಬಾಬುವು, "ಅಳಿಯನಿಗೆ ಕೆಲಸವಿಲ್ಲ. ಆದ ರಿಂದ ಕೊಂಚ ಹಣವನ್ನು ಕೊಟ್ಟು ಬಿಡು" ಎಂದು ಹೇಳಿ ದ್ದರು.

ಅನುಪಮೆಯು ಯಾವಾಗಲೂ ಹತ್ತಿರ ಸಹ ಬರು ತ್ತಿರಲಿಲ್ಲ. ಅತ್ತೆಯೂ ಕೂಡ ಯಾವ ರೀತಿಯಲ್ಲಿಯೂ ವಿಚಾರಿಸಿಕೊಳ್ಳುತ್ತಲೂ ಇರಲಿಲ್ಲ. ಆದರೂ ರಾಮದುಲಾ ನನು ಮಾತ್ರ ದಿನಗಳನ್ನು ಬಹಳ ಸಂತೋಷದಿಂದ ಕಳೆಯು ತ್ತಿದ್ದನು. ಮಾನ, ಮರ್ಯಾದೆ, ದೊಡ್ಡಸ್ತಿಕೆ, ಕಾನೂನು ಕಾಯಿದೆಗಳಿಗೆ ಅವನು ಸ್ವಲ್ಪವೂ ಮನಸ್ಸು ಕೊಡುತ್ತಿರ ಲಿಲ್ಲ. ಏನು ಸಿಗುತ್ತಿತ್ತೋ ಅಷ್ಟರಿಂದಲೇ ತೃಪ್ತಿಹೊಂದು ತ್ತಿದ್ದ. ಎರಡು ಹೊತ್ತೂ ಸಮೃದ್ಧಿಯಾಗಿ ಊಟ ಬೀಳು ತ್ತಿತ್ತು. ಮುಪ್ಪಿನಲ್ಲಿ ಇಷ್ಟು ನಡೆಯುವುದೇ ಬಹಳ ಹೆಚ್ಚೆಂದು ಅವನು ತಿಳಿದಿದ್ದ. ಆದರೆ ಸುಖಭೋಗಗಳ ದಿನಗಳು ಅವನ ಭಾಗಕ್ಕೆ ಹೆಚ್ಚು ಬಾಕಿ ಇರಲಿಲ್ಲ. ಒಂದು ಕಡೆ ಜೀರ್ಣವಾದ ಶರೀರ. ಅಲ್ಲದೆ ಅವನನ್ನು ಸ್ವರ್ಗಕ್ಕೆ ರವಾನಿಸಬೇಕೆಂದು ಮನಮಾಡಿ ಒಂದೆರಡು ವರ್ಷಗಳಿಂದ ಅವನ ದೇಹವನ್ನು ಆಶ್ರಯಿಸಿದ್ದ ಗೂರಲು ರೋಗವು ಎಳೆ ದಾಡುತ್ತಿತ್ತು. ಈಗ ಒಟ್ಟಿನಲ್ಲಿ ರೋಗದ ಎಳೆದಾಟವು ಜೋರಿನಿಂದ ನಡೆದಿತ್ತು. ಜಗದ್ಬಂಧು ಬಾಬುವು ರೋಗವು ರಾಮದುಲಾಲನ ಪ್ರತಿ ಕೀಲು ರಕ್ತನಾಳದಲ್ಲಿಯೂ ಹರ ಡಿರುವುದನ್ನು ಕಂಡರು. ಆ ಊರಿನಲ್ಲಿ ಆ ರೋಗಕ್ಕೆ ಸರಿ ಯಾಗಿ ವ್ಯವಸ್ಥೆ ಆಗುವುದಿಲ್ಲವೆಂದು ಅವನನ್ನು ಕಲಿಕತ್ತೆಗೆ

ಕಳುಹಿಸಿಕೊಟ್ಟರು. ಅಲ್ಲಿಯ ವ್ಯವಸ್ಥೆ ಸರಿಯಾಗಿ ಕೆಲವು ದಿನಗಳವರೆಗೆ ನಡೆಯುತ್ತಿತ್ತು. ಆ ಮೇಲೆ ಸತೀ ಸಾಧ್ವಿ ಅನುಪಮೆಯ ಸೌಭಾಗ್ಯದ ಎರಡನೆಯ ವರ್ಷವು ಪೂರ್ತಿಯಾಯಿತೋ ಇಲ್ಲವೋ ಎನ್ನುವಷ್ಟರಲ್ಲಿಯೇ ರಾಮದುಲಾಲನು ಪ್ರಪಂಚವನ್ನು ಬಿಟ್ಟು ತೆರಳಿದನು.

---

—೪—

ಅನುಪಮೆಯು ಬಹಳ ಅತ್ತಳು. ಹಿಂದೂಗಳಲ್ಲಿ ಗಂಡನು ಸತ್ತರೆ ಹೆಂಗಸರು ಅಳಲೇಬೇಕು. ಅದಕ್ಕಾಗಿ ಅತ್ತಳು. ಆಮೇಲೆ ಅವಳು ತನ್ನ ಸ್ವಂತ ಇಚ್ಛೆಯಿಂದ ಬಿಳಿ ಬಟ್ಟೆಯನ್ನು ಧರಿಸಿದಳು. ಅಲ್ಲದೆ ಒಡವೆಗಳನ್ನೆಲ್ಲಾ ತೆಗೆದುಬಿಟ್ಟಳು. ತಾಯಿಯು ಅಳುತ್ತಾ "ಅಯ್ಯೋ, ನಿನ್ನ ಈ ರೂಪವನ್ನು ನೋಡೋಕೆ ನನ್ನಿಂದ ಆಗೋಲ್ವಲ್ಲೆ. ಇನ್ನೇನು ಇಲ್ಲದಿದ್ದರೂ ಹೋಗಲಿ ಕೈಗೆರಡು ಬಳೆಗಳನ್ನಾದರೂ ತೊಟ್ಟುಕೊಂಡಿರು" ಎಂದರು.

"ಹಾಗೆಂದಿಗೂ ಆಗಲು ಸಾಧ್ಯವಿಲ್ಲ. ವಿಧವೆಯರು ಒಡವೆಗಳನ್ನು ಧರಿಸಬಾರದು"

"ಆದರೆ ನೀನಿನ್ನೂ ಹಾಲು ಹಸುಳೆ".

"ಆದರೇನು? ಹಿಂದೂ ಸ್ತ್ರೀಯರಲ್ಲಿ ವಿಧವೆಯಾದ ಮೇಲೆ ಹುಡುಗಿ ಮುದುಕಿ ಎಂಬ ಭೇದವಿರುವುದಿಲ್ಲ".

ತಾಯಿಯು ಈಗೇನು ಹೇಳಿಯಾರು? ಸುಮ್ಮನೆ ಅಳ ತೊಡಗಿದರು. ಅನುಪಮೆಯು ವಿಧವೆಯಾದುದರಿಂದ ಜನಗಳಿಗೆ ಹೊಸ ಶೋಕ ಒದಗಿದಂತಾಗಲಿಲ್ಲ. ಎಲ್ಲರಿಗೂ ಗೊತ್ತೇ ಇತ್ತು ಅವಳು ಒಂದೆರಡು ವರ್ಷಗಳಲ್ಲಿಯೇ ವಿಧವೆಯಾಗುವಳೆಂದು. "ಹೆಣದೊಂದಿಗೆ ಮದುವೆ ಮಾಡುವುದರಿಂದ ಅವಳು ಸಧವೆಯಾಗಿರುವಳೆ?" ಎಂದು ಯಾರೋ ಹೇಳಿದರು. ಅನುಪಮೆಯ ತಂದೆಗೂ ಗೊತ್ತಿತ್ತು; ತಾಯಿಗೂ ಗೊತ್ತಿತ್ತು. ಆದಕಾರಣದಿಂದ ಯಾರಿಗೂ

ಹೊಸ ದುಃಖವಾಗಲಿಲ್ಲ. ಯಾವುದು ಆಗ ಬೇಕಾಗಿತ್ತೋ ಅದು ಮದುವೆಯಾದ ರಾತ್ರಿಯೇ ಆಗಿ ಹೋಗಿತ್ತು. ಅನುಪಮೆಯು ಪತಿಯನ್ನು ಪ್ರೇಮ ಮಾಡಲಿಲ್ಲ, ತಿಳಿದಿರಲಿಲ್ಲ, ಗುರುತಿಸಿರಲಿಲ್ಲ, ಆದರೂ ಕೂಡ ಅವಳು ಕಠೋರ ವೈಧವ್ಯ ವ್ರತವನ್ನು ಹಿಡಿದಿದ್ದಳು. ರಾತ್ರಿಯ ಹೊತ್ತು ನೀರನ್ನು ಸಹ ಮುಟ್ಟುತ್ತಿರಲಿಲ್ಲ. ಮಧ್ಯಾಹ್ನದ ಹೊತ್ತು ಒಂದು ಹಿಡಿ ಅಕ್ಕಿಯನ್ನು ಬೇಯಿಸಿಕೊಳ್ಳುತ್ತಿದ್ದಳು. ಅಲ್ಲದೆ ಏಕಾದಶಿ ದಿನ ನಿರ್ಜಲ ಉಪವಾಸ ಮಾಡುತ್ತಿದ್ದಳು. ಇಂದು ಪೂರ್ಣಿಮೆ, ನಾಳೆ ಅಮಾವಾಸ್ಯೆ, ನಾಳಿದ್ದು ಶಿವರಾತ್ರೆ ಎಂದು ನೆವವಿಟ್ಟುಕೊಂಡು ತಿಂಗಳಿನಲ್ಲಿ ಹದಿನೈದು ದಿನ ಏನನ್ನೂ ತಿನ್ನುತ್ತಿರಲಿಲ್ಲ. ಯಾರಾದರೂ ಏನಾದರೂ ಹೇಳಿದರೆ, "ನನ್ನ ಇಹ ಲೋಕದಲ್ಲಿನ ಸುಖ ನಷ್ಟವಾಯಿತು, ಪರಲೋಕಕ್ಕಾಗಿಯಾದರೂ ಮಾಡಲು ಕೊಂಚ ಅವಕಾಶ ಕೊಡಿ." ಎಂದು ಹೇಳುವಳು. ಆದರೆ ಅವಳು ಇಷ್ಟನ್ನು ಹೇಗೆ ಸಹಿಸಿಕೊಳ್ಳುವಳು? ಉಪವಾಸ ಮತ್ತು ನಿಯಮವಿಲ್ಲದ ಆಹಾರ ವ್ಯವಹಾರಗಳಿಂದ ಒಣಗಿ ಅರ್ಧವಾದಳು. ಅವಳ ಸ್ಥಿತಿಯನ್ನು ನೋಡಿ ಅವಳ ತಾಯಿಯು ಸತ್ತೇ ಹೋಗುವಳೆಂದು ತಿಳಿದಿದ್ದರು. ಸತ್ತು ಹೋದರೂ ಅದರಲ್ಲಿ ವಿಚಿತ್ರವೇನೂ ಇಲ್ಲವೆಂದು ತಂದೆಯು ತಿಳಿದಿದ್ದರು. ಈ ಕಾರಣದಿಂದ ಒಂದು ದಿನ ಅವರು ಹೆಂಡತಿಯನ್ನು ಕರೆದು, "ಅನೂಗೆ ಮತ್ತೆ ಮದುವೆಮಾಡು" ಎಂದು ಹೇಳಿದರು. ಗೃಹಿಣಿಯು ಆಶ್ಚರ್ಯಚಕಿತಳಾಗಿ, "ಹೀಗೆಲ್ಲಾದರೂ ಆಗುತ್ತೆ? ಧರ್ಮ ಹೋಗುತ್ತೆ" ಎಂದರು.

"ಇಲ್ಲ, ನಾನು ವಿಚಾರ ಮಾಡಿ, ಎರಡು ಸಲ ಮದುವೆ ಮಾಡುವುದರಿಂದ ಧರ್ಮ ಹೋಗೋದಿಲ್ಲ ಅಂತ ತಿಳಿ ದಿದ್ದೀನಿ. ವಿವಾಹಕ್ಕೂ, ಧರ್ಮಕ್ಕೂ ಯಾವ ಸಂಬಂಧವೂ ಇಲ್ಲ. ಆದರೆ ನನ್ನ ಮಗಳನ್ನು ಈ ರೀತಿ ಕೊಲ್ಲುವುದು ಧರ್ಮ ಹಾನಿಯಾಗುತ್ತೆ."

"ಹಾಗಾದರೆ ಮಾಡಿ ಬಿಡಿ."

ಆದರೆ ಅನುಪಮೆಯು ಈ ಮಾತನ್ನು ಕೇಳುತ್ತಲೇ ತಲೆ ಯನ್ನು ಕೊಂಕಿಸಿ, "ಹೀಗೆಂದಿಗೂ ಆಗಲು ಸಾಧ್ಯವಿಲ್ಲ" ಎಂದು ಧೃಡತೆಯಿಂದ ಹೇಳಿದ್ದಳು. ಆಗ ಜಗದ್ಬಂಧು ಬಾಬುವು ತಾವೇ ಸ್ವತಃ ಅನುಪಮೆಯನ್ನು ಕರೆದು, "ಸಾಧ್ಯವಿದೆಯಮ್ಮಾ" ಎಂದರು.

"ಇದರಿಂದ ನನ್ನ ಇಹಲೋಕ ಮತ್ತು ಪರಲೋಕ ಎರಡೂ ಹಾಳಾಗುತ್ತೆ"

"ಹಾಳೂ ಆಗಿಲ್ಲ, ಹಾಳಾಗುವುದೂ ಇಲ್ಲ. ಆದರೆ ಮದುವೆಮಾಡಿಕೊಳ್ಳದಿರುವುದರಿಂದ ಹಾಳಾಗುವ ಸಂಭವ ವಿದೆ. ಒಪ್ಪಿ ಬಿಡು. ಗುಣವಂತನಾದ ಗಂಡ ಸಿಕ್ಕರೆ ನೀವಿಬ್ಬರೂ ಸೇರಿ ಪ್ರಪಂಚದ ಕೆಲಸವನ್ನು ಮಾಡೀರಿ"

"ಏಕೆ? ಒಬ್ಬಳೇ ಮಾಡಲಾರೆನೆ"

"ಇಲ್ಲ ಮಗು. ಮಾಡಲಾರೆ. ಹೆಚ್ಚು ಕಡಿಮೆ ಹಿಂದೂ ಸ್ತ್ರೀಯರು ಮಾಡಲಾರರು. ಧರ್ಮದ ಮಾತು ಹಾಗಿರಲಿ ಒಂದು ಸಹಜವಾದ ಕೆಲಸಕ್ಕೆ ಕೂಡ ಅವರಿಗೆ ಇನ್ನೊಬ್ಬನ ಆಸರೆ ಪಡೆಯುವ ಕಾಲ ಒದಗುತ್ತೆ. ಇಂಥಾದ್ದರಲ್ಲಿ ಅಂತಹ ಆಸರೆಯನು ಪತಿಯು ವಿನಃ ಮತ್ತಾ ಗು ಕೊಡಲಾ ಗು

ಹೇಳು ? ಅಲ್ಲದೆ ಯಾವ ಕಾರಣಕ್ಕಾಗಿ ನೀನು ಈ ಕಠಿಣ ಸಜವನ್ನು ಅನುಭವಿಸಬೇಕಾಗಿದೆ?"

"ನನ್ನ ಪೂರ್ವಜನ್ಮದ ಫಲ" ಎಂದು ಅನುಪಮೆಯು ಕೆಳಗೆ ನೋಡುತ್ತಾ ಹೇಳಿದಳು.

ಮತಾಂಧ ಹಿಂದುವಾದ ಜಗದ್ಬಂಧು ಬಾಬು ಅವರ ಕಿವಿಗಳಿಗೆ ಈ ಮಾತುಗಳು ಶೂಲಪ್ರಾಯವಾದುವು. ಸ್ವಲ್ಪ ಹೊತ್ತು ಸುಮ್ಮನಿದ್ದು, "ಹೇಗೆಯೇ ಇದ್ದರೂ ನಿನಗಾಗಿ ಒಬ್ಬ ರಕ್ಷಕನು ಬೇಕು. ನಮ್ಮನಂತರ ನಿನ್ನನ್ನು ಯಾರು ನೋಡಿಕೊಳ್ಳುವರು."

"ಅಣ್ಣನು ನೋಡಿಕೊಳ್ಳುತ್ತಾನೆ"

"ದೇವರು ಹಾಗೆಂದೂ ಮಾಡದಿರಲಿ. ಒಂದು ವೇಳೆ ಅವನು ಹಾಗೆ ನೋಡಿಕೊಳ್ಳದಿದ್ದರೆ? ಅವನು ನಿನ್ನ ತಾಯಿಯ ಹೊಟ್ಟೆಯ ಮಗನಲ್ಲ. ನನಗೆ ಗೊತ್ತಿರುವುದ ರಲ್ಲಿ ಅವನ ಮನಸ್ಸೂ ಒಳ್ಳೆಯದಲ್ಲ". ಅನುಪಮೆಯು "ಆಗ ವಿಷ ನುಂಗುತ್ತೇನೆ" ಎಂದು ಮನದೊಳಗೇ ಅಂದುಕೊಂಡಳು. ತಂದೆಯವರು ಮತ್ತೆ ಹೇಳಲು ಮೊದಲು ಮಾಡಿದರು. "ಇನ್ನೂ ಒಂದು ಮಾತಿದೆ ಯಮ್ಮಾ. ಅನೂ, ತಂದೆಯಾಗಿಯೂ ಆ ಮಾತನ್ನು ಹೇಳಬೇಕಾಗಿದೆ. ಮನುಷ್ಯನ ಮನಸ್ಸು ಒಂದೇ ಸಮ ನಾಗಿರುವುದೆಂದು ಹೇಳಲು ಸಾಧ್ಯವಿಲ್ಲ. ನಿಜವಾಗಿಯೂ ತಾರುಣ್ಯದಲ್ಲಿ ಮನಸ್ಸಿನ ಪ್ರವೃತ್ತಿಗಳನ್ನು ವಶದಲ್ಲಿಟ್ಟು ಕೊಂಡಿರುವುದು ಮುನಿ ಋಷಿಗಳಿಗೂ ಕಷ್ಟಸಾಧ್ಯವಾದ

ಮಾತು. ಅನುಪಮೆಯು ಕೊಂಚ ಹೊತ್ತು ಸುಮ್ಮ ನಿದ್ದು, "ಜಾತಿಯು ಹೊರಟು ಹೋದೀತು?" ಎಂದಳು.

"ಇಲ್ಲಮ್ಮ ಜಾತಿ ಹೋಗೋಲ್ಲ. ನನ್ನ ಕಾಲ ಮುಗಿ ಯುತ್ತಾ ಬಂತು. ಈಗಿನ್ನೂ ಕಣ್ಣು ಬಿಡುತ್ತಾ ಇದ್ದೇನೆ."

ಅನುಪಮೆಯು ತಲೆಯಲ್ಲಾಡಿಸಿದಳು. ಮನಸ್ಸಿ ನಲ್ಲಿಯೇ, "ಆಗ ಜಾತಿ ಹೋಗುತ್ತಿತ್ತು. ಆದರೆ ಈಗ ಹೋಗೋಲ್ಲ. ನೀವುಗಳು ಕಣ್ಣು ಮುಚ್ಚಿಕೊಂಡು ನನ್ನ ಬಲಿದಾನವನ್ನು ಮಾಡಿದಾಗ ಏಕೆ ಯೋಚಿಸಲಿಲ್ಲ? ಇಂದು ನನ್ನ ಕಣ್ಣೂ ತೆರೆದಿದೆ" ಎಂದುಕೊಂಡಳು.

ಅವಳನ್ನು ಒಪ್ಪಿಸುವುದು ಯಾವ ತರಹದಿಂದಲೂ ಸಾಧ್ಯವಾಗಲಿಲ್ಲ ಆಗ ಜಗದ್ಬಂಧು ಬಾಬುವು, "ಹಾಗಾ ದರೆ ಸರಿಯಮ್ಮಾ, ನಿನಗೆ ಹೇಗೆ ಸರಿ ತೋರುತ್ತೋ ಹಾಗೆ ಮಾಡು. ನಿನ್ನ ಇಷ್ಟಕ್ಕೆ ವಿರುದ್ಧವಾಗಿ ಮದುವೆ ಮಾಡಲು ನನಗೆ ಇಷ್ಟವಿಲ್ಲ. ನಿನಗೆ ಊಟ ಉಡುಗೆಗೆ ಯಾವಾಗಲೂ ತೊಂದರೆಯಾಗದಿರುವಂತೆ ಅನುಕೂಲ ಖಂಡಿತ ಮಾಡಿ ಹೋಗುತ್ತೇನೆ. ಆಮೇಲೆ ಧರ್ಮದಲ್ಲಿ ಮನಸ್ಸು ನಿಲ್ಲಿಸಿ, ನಿನಗೆ ಯಾವುದರಲ್ಲಿ ಸುಖ ದೊರೆ ಯುತ್ತೋ ಅದನ್ನೇ ಮಾಡು" ಎಂದರು.

---

—೫—

ಮೂರು ವರುಷಗಳ ಮೇಲೆ ಬಿಡುಗಡೆ ಹೊಂದಿದರೂ ಲಲಿತ ಮೋಹನನು ಬರಲಿಲ್ಲ. "ನಾಚಿಕೆಯಿಂದ ಬಂದಿಲ್ಲವೆಂ"ದು ಕೆಲವರೂ, "ಈ ಊರಿನಲ್ಲಿ ಇನ್ನೇನು ಮುಖ ತೋರಿಸಿಯಾನೆಂ"ದು ಕೆಲವರೂ ಆಡಿಕೊಳ್ಳುತ್ತಿದ್ದರು.

ಲಲಿತ ಮೋಹನನು ಬಹಳ ಊರುಗಳನ್ನು ತಿರುಗಿ ಎರಡು ವರ್ಷಗಳ ಮೇಲೆ ಅಕಸ್ಮಾತ್ ಮನೆಗೆ ಬಂದ. ಅವನ ತಾಯಿಯು ಆನಂದದಿಂದ ಅವನ ತಲೆಯನ್ನು ಚುಂಬಿಸಿ ಆಶೀರ್ವದಿಸಿ, "ಮಗು, ಈಗ ಮದುವೆ ಮಾಡಿಕೊಂಡು ಗೃಹಸ್ಥನಾಗು. ಹಣೆಯಲ್ಲಿ ಏನು ಬರೆದಿದ್ದಿತೋ ಅದು ಆಯಿತು. ಅದಕ್ಕಾಗಿ ಯೋಚನೆ ಮಾಡಬೇಡ" ಎಂದರು. ಲಲಿತ ಮೋಹನನೂ ಏನಾದರೊಂದನ್ನು ಮಾಡಲು ನಿಶ್ಚಯಿಸಿದ್ದ.

ಐದು ವರ್ಷಗಳಾದ ಮೇಲೆ ಬಂದ ಲಲಿತ ಮೋಹನನು ಊರಿನಲ್ಲಿ ಬಹಳ ಪರಿವರ್ತನೆಯಾಗಿರುವುದನ್ನು ಕಂಡನು. ಅದರಲ್ಲೂ ಜಗದ್ಬಂಧು ಬಾಬುವಿನ ಮನೆಯನ್ನು. ಅನುಪಮೆಯ ತಂದೆತಾಯಿಗಳಾರೂ ಈಗ ಜೀವಂತರಾಗಿರಲಿಲ್ಲ. ಚಂದ್ರನಾಥ ಬಾಬುವೇ ಮನೆಯ ಯಜಮಾನ. ವಿಧವೆಯಾದ ಅನುಪಮೆಯು ಅಲ್ಲೇ ಇರುತ್ತಾಳೆ. ಅವಳಿಗೆ ಬೇರೆಲ್ಲೂ ಇರಲು ಜಾಗವಿಲ್ಲದುದೇ ಇದಕ್ಕೆ ಕಾರಣ. ತಾಯಿಯು ಮೊದಲೇ ಸತ್ತಿದ್ದರು. ತಂದೆಯು ಸತ್ತಮೇಲೆ, "ತಂದೆಯು ಕೊಟ್ಟು ಹೋಗಿರುವ ಹಣದಿಂದ ಯಾವುದಾದರೂ ಯಾತ್ರಾಸ್ಥಳಕ್ಕೆ ಹೋಗಿ ಇದ್ದು ಬಿಡುತ್ತೇನೆ.

ಅದೇ ದುಡ್ಡಿನಿಂದ ಧರ್ಮಾಚರಣೆ ವ್ರತನಿಯಮಾದಿ ಗಳನ್ನು ಪಾಲಿಸಿಕೊಂಡು ಅಂತಿಮ ಜೀವನವನ್ನು ಸುಲಭ ವಾಗಿ ಕಳೆಯುತ್ತೇನೆ'' ಎಂದು ಅನುಪಮೆಯು ಯೋಚಿಸಿ ದಳು. ಆದರೆ ತಂದೆಯ ದಿನ ವಾರಾದಿಗಳು ಕಳೆದ ಮೇಲೆ ಮೃತಿ ಪತ್ರವನ್ನು ನೋಡಿ ಅನುಪಮೆಗೆ ಬಹಳ ನೋವಾ ಯಿತು. ತಂದೆಯು ಕೇವಲ ಐದು ನೂರು ರೂಪಾಯಿ ಗಳನ್ನು ಕೊಟ್ಟಿದ್ದಾನೆಂದು ಗೊತ್ತಾಯಿತು. ಅವರು ದೊಡ್ಡ ಮನುಷ್ಯರಾಗಿದ್ದರು. ಈ ಕೊಂಚ ರೂಪಾಯಿಗಳು ಅವರ ಅಗಾಧ ಧನ ಸಂಪತ್ತಿನಲ್ಲಿ ಯಾವ ಲೆಖ್ಖಕ್ಕೂ ಬರುವುದಿಲ್ಲ. ವಾಸ್ತವವಾಗಿ ಈ ರೂಪಾಯಿಗಳಿಂದ ಯಾವೊಬ್ಬನ ಜೀವನವೂ ಸಾಯುವವರೆಗೂ ನಡೆಯಲು ಸಾಧ್ಯವಿಲ್ಲ. ಊರಿನ ಜನರಲ್ಲೆಲ್ಲಾ ಗುಲ್ಲೆದ್ದಿತ್ತು – ಈ ಮೃತಿ ಪತ್ರ ಜಗದ್ಬಂಧು ಬಾಬುವಿನದಲ್ಲ. ಇದರಲ್ಲೇನೋ ಮೋಸ ವಿದೆ ಎಂದು. ಆದರೆ ಇದಕ್ಕೆ ರುಜುವಾತು? ನಿರುಪಾಯ ಳಾಗಿ ಅನುಪಮೆಯು ಚಂದ್ರಬಾಬುವಿನ ಮನೆಯಲ್ಲೇ ಇರ ತೊಡಗಿದಳು.

ತಂದೆಯು ಸಾಯುವುದಕ್ಕೆ ಮುಂಚೆ ಮಲತಾಯಿಯ ಮನೋವೃತ್ತಿಯು ಹೀಗೆ ಎಂದು ತಿಳಿಯೋದಿಲ್ಲ ಅಂತ ಜನ ಹೇಳುತ್ತಾರೆ. ಹಾಗೆಯೇ ಮಲಅಣ್ಣನ ವಿಷಯ ತಂದೆಯ ಜೀವಂತ ಕಾಲದಲ್ಲಿ ತಿಳಿಯುವುದು ಕಠಿಣ. ತನ್ನ ಅಣ್ಣ ಚಂದ್ರಬಾಬುವು ಒರಟನೆಂದು ಇಷ್ಟು ದಿನಗಳ ಮೇಲೆ ಅನುಪಮೆಗೆ ಕಂಡು ಬಂತು. ಎಷ್ಟೋ ತರಹ ಅಧಮ ಶ್ರೇಣಿಯ ಜನರು ಕಂಡು ಬರುತ್ತಾರೆ. ಅವರೆಲ್ಲ ರಿಗಿಂತಲೂ ಚಂದ್ರಬಾಬುವು ನಿಕೃಷ್ಟನು. ಹೃದಯದಲ್ಲಿ

ಎಳ್ಳಷ್ಟೂ ದಯೆ ದಾಕ್ಷಿಣ್ಯವಿಲ್ಲ—ಕಣ್ಣುಗಳಲ್ಲಿ ಕರುಣೆ ಯೆಂಬುದೇ ಕಾಣುವುದಿಲ್ಲ. ಅನುಪಮೆಯು ಆಗ ನಿರಾ ಶ್ರಿತಳು. ಅಂತಹ ಸ್ಥಿತಿಯಲ್ಲಿಯೂ ಅವನು ಅವಳೊಡನೆ ಎಂತಹ ಕೀಳು ವ್ಯವಹಾರ ಮಾಡಲು ಪ್ರಾರಂಭಿಸಿದನೆಂದು ಈ ಬಾಯಿಂದ ಹೇಳಿ ತಿಳಿಸಲು ಸಾಧ್ಯವಿಲ್ಲ. ಪ್ರತಿ ಮಾತಿ ನಲ್ಲಿ, ಕೂತರೆ, ನಿಂತರೆ – ತಿರಸ್ಕಾರ – ಅವಮಾನ – ಲಾಂಛನ! ಇವುಗಳನ್ನು ಬಹಳ ದಿನಗಳಿಂದ ನೋಡಿ ಸಹಿಸಲು ಸಾಧ್ಯವಿರುತ್ತಿರಲಿಲ್ಲ. ಆದರೂ ಅವರು ಅವ ಳನ್ನು ವೈಷಮ್ಯದಿಂದ ನೋಡುತ್ತಾರೆ. ದೊಡ್ಡ ಸೊಸೆಯು ಮೊದಲು ಬಹಳ ಪ್ರೀತಿಸುತ್ತಿದ್ದಳು. ಈಗ ಅವಳೂ ಕೂಡ ಅನುಪಮೆಯನ್ನು ನೋಡಿ ಸಹಿಸಲಾರಳು. ಯಾವಾಗ ಅನುಪಮೆಯು ದೊಡ್ಡವರ ಮಗಳಾಗಿದ್ದಳೋ, ಯಾವಾಗ ಅವಳ ತಾಯಿತಂದೆಗಳು ಬದುಕಿದ್ದರೋ, ಯಾವಾಗ ಅವಳ ಒಂದೊಂದು ಮಾತಿಗೆ ಐದಾರು ದಾಸ ದಾಸಿಯರು ಓಡಿ ಓಡಿ ಬರುತ್ತಿದ್ದರೋ ಆಗ ಅವಳೂ ಪ್ರೀತಿಸುತ್ತಿದ್ದಳು. ಆದರೆ ಈಗ? ಅವಳು ದುಃಖಿನಿ– ವಿಧವೆ? ತನ್ನವರೆಂದು ಹೇಳಿಕೊಳ್ಳಲು ಯಾರೂ ಇಲ್ಲ. ದುಡ್ಡು ಕಾಸಂತೂ ಮೊ ದಲೇ ಇಲ್ಲ. ಇನ್ನೊಬ್ಬರ ಅನ್ನ ತಿನ್ನದೆ ಅವಳ ಜೀವನ ಕಳೆಯಲಾರದು. ಅವಳಿಗೆ ಈಗ ಯಾರು ಸಹಾಯ ಮಾಡುತ್ತಾರೆ? ಅವಳು ಈಗ ಯಾರಿಗೆ ಬೇಕಾಗಿದ್ದಾಳೆ. ದೊಡ್ಡ ಸೊಸೆಗೆ ಮೂರು ನಾಲ್ಕು ಮಕ್ಕಳಿವೆ. ಅವುಗಳ ಭಾರವೆಲ್ಲ ಅನುಪಮೆಯ ಮೇಲೆಯೋ! ಅವುಗಳಿಗೆ ಉಣಿಸು ವುದು, ತೊಡಿಸುವುದು, ಸ್ನಾನ ಮಾಡಿಸುವುದು, ಒರೆಸು ವುದು, ಎತ್ತಿಳಿಸುವುದು, ಆಡಿಸುವುದು, ಹತ್ತಿರ ಮಲಗಿಸಿ

ಕೊಳ್ಳುವುದು ಎಲ್ಲವೂ ಅನುಪಮೆಯ ಪಾಲಿನದು. ಇವು ಗಳಲ್ಲಿ ಯಾವುದು ಕೊಂಚ ಹೆಚ್ಚು ಕಡಿಮೆಯಾದರೂ ದೊಡ್ಡ ಸೊಸೆಯು ಕೋಪಗೊಳ್ಳುತ್ತಾಳೆ. ಕೂಡಲೇ ಹಿಂದು ಮುಂದು ನೋಡದೆ ನಾಲ್ಕಾರು ಮಾತುಗಳನ್ನು ಅಂದು ಬಿಡುತ್ತಾಳೆ. ಇಷ್ಟೇ ಕೆಲಸ ಸಾಲದೆ ಪ್ರತಿ ದಿನ ಎರಡು ಹೊತ್ತೂ ಚಂದ್ರಬಾಬುವಿಗಾಗಿ ನಾಲ್ಕಾರು ತರಕಾರಿ ಮಾಡಬೇಕಾಗುತ್ತಿತ್ತು. ಅಡಿಗೆಯವನಿಗೆ ರುಚಿಕರವಾಗಿ ಮಾಡಲು ಬಾರದೆಂಬುದೇ ಇದಕ್ಕೆ ಸಬೂಬು. ಮಾಡಿ ತೋಡದಿದ್ದರೆ ಅಂದು ಚಂದ್ರಬಾಬುವು ಊಟವನ್ನೇ ಮಾಡುತ್ತಿರಲಿಲ್ಲ. ಏಕಾದಶಿಯಾಗಲೀ, ದ್ವಾದಶಿಯಾಗಲೀ, ಉಪವಾಸವಾಗಲಿ ಇನ್ನೇನಾದರೂ ಆಗಲಿ ಇಷ್ಟಂತೂ ಮಾಡಲೇ ಬೇಕಾಗುತ್ತಿತ್ತು. ವಿಧವೆಯಾದಂದಿನಿಂದ ಅನು ಪಮೆಯು ಬೆಳಗಿನ ಜಾಮವೇ ಎದ್ದು, ಸ್ನಾನಮಾಡಿ, ಬಹಳ ಹೊತ್ತು ಪೂಜೆ ಮಾಡುವ ನಿಯಮವನ್ನಿಟ್ಟು ಕೊಂಡಿದ್ದಳು. ಆದರೆ ಈಗ ಅವಳಿಗೆ ಅದಕ್ಕೂ ಅಷ್ಟು ಸಮಯ ಕೂಡ ಕೊಡಲ್ಪಡುತ್ತಿರಲಿಲ್ಲ. ಕೊಂಚ ಹೊತ್ತಾ ದರೆ ಸರಿ, ಸೊಸೆ ರಾಣಿಯು, "ಕೊಂಚ ಜಾಗ್ರತೆ ಮಾಡು. ಮಕ್ಕಳು ಅಳುತ್ತಾ ಇವೆ. ಇನ್ನೂ ವರೆಗೂ ತಿನ್ನಲು ಏನೂ ಆಗಿಲ್ಲ" ಎಂದು ಕೂಗುವಳು. ಅನುಪಮೆಯು ಹೇಗಿದ್ದು ದನ್ನು ಹಾಗೆಯೇ ಬಿಟ್ಟು ಎದ್ದು ಬಿಡುತ್ತಿದ್ದಳು. ಬಾಯಿಂದ ಏನೊಂದು ಮಾತನ್ನೂ ಆಡಲು ಸಾಧ್ಯವಿಲ್ಲ. ಏಕಾದಶಿಯ ದೀರ್ಘ ಉಪವಾಸವನ್ನು ಮಾಡಿದ್ದರೂ ರಾತ್ರಿಯ ಹೊತ್ತು ಅಡುಗೆ ಮಾಡಬೇಕಾಗುತ್ತಿತ್ತು. ಪಾಪ! ಬಾಯಾರಿಕೆ ಯಿಂದ ಗಂಟಲು ಒಣಗಿಕೊಂಡು ಬರುವುದು. ಬೆಂಕಿಯ

ಕಾವು ಸುಡುತ್ತಿತ್ತು. ಶರೀರವು ಅವಶವಾಗುತ್ತಿತ್ತು. ಆದರೂ ಬಾಯಿಯಿಂದ "ಉಹು" ಎಂದು ಕೂಡ ಅನ್ನುತ್ತಿರಲಿಲ್ಲ. ಸ್ಥಿತಿಯು ಬದಲಾಯಿಸಿದರೆ ಸಹನ ಶಕ್ತಿಯೂ ಹೆಚ್ಚುತ್ತದೆ. ಜಗದೀಶ್ವರನು ಅವನ್ನು ಕಲಿಸಿ ಕೊಡುತ್ತಾನೆ. ಇಲ್ಲದಿದ್ದರೆ ಅನುಪಮೆಯು ಇದುವರೆಗೆಂದೋ ಸತ್ತುಹೋಗಿರಬೇಕಾಗಿತ್ತು.

ಇಂತಹ ಸಂಸಾರದಲ್ಲಿ ಅವಳಿಗಿಂತ ದಾಸ ದಾಸಿಯರು ಎಷ್ಟೋ ಮೇಲು. ಅವರಿಗೆ ಯಾರಾದರೂ ಕಠಿಣವಾದ ಮಾತನ್ನು ಅಂದರೆ ಅದಕ್ಕೆ ಬದಲು ಜವಾಬು ಕೊಡಲು ಸಾಧ್ಯವಿದೆ. "ನಮ್ಮ ಲೆಕ್ಕಾಚಾರ ಫೈಸಲ್ ಮಾಡಿ. ನಮ್ಮನ್ನ ಕಳುಹಿಸಿ ಬಿಡಿ" ಎಂದಿಷ್ಟಾದರೂ ಹೇಳಲು ಸಾಧ್ಯವಿದೆ. ಆದರೆ ಅನುಪಮೆಗೆ ಇಷ್ಟೂ ಹೇಳಲು ಸಾಧ್ಯವಿಲ್ಲ. ಅವಳು ಹಣವಿಲ್ಲದೆ ಕೊಳ್ಳಲ್ಪಟ್ಟ ದಾಸಿ. ಅವಳನ್ನು ಹೊಡೆಯಲಿ, ಬಡಿಯಲಿ, ಕತ್ತರಿಸಲಿ ಏನು ಬೇಕಾದರೂ ಮಾಡಲಿ ಅವಳು ಅಲ್ಲೇ ಇರಬೇಕಾಗಿತ್ತು. ಮತ್ತೆಲ್ಲಿಗೆ ತಾನೆ ಹೋದಾಳು? ಒಂದು ಕಡೆ ವಿಧವೆ; ಇನ್ನೊಂದು ಕಡೆ ದೊಡ್ಡ ಮನುಷ್ಯರ ಮಗಳು! ಅನುಪಮೆಯ ಸ್ಥಿತಿಯರಿಯುವುದು ಕಷ್ಟ. ಒಂದು ವೇಳೆ ಯಾರಿಗಾದರೂ ಅರಿಯುವುದು ಸಾಧ್ಯವಿದ್ದರೆ ಅದು ಬೇರೆ ದಿಕ್ಕಿಲ್ಲದ ಹಿಂದೂ ವಿಧವೆಗೇ ತಿಳಿಯಬೇಕು!

ಇಂದು ದ್ವಾದಶಿ. ಅನುಪಮೆಯು ಬೆಳಗ್ಗೆ ಅಪ್ಪೊತ್ತಿಗೆ ಎದ್ದು ಸ್ನಾನಮಾಡಿ ಪೂಜೆಗೆ ಕುಳಿತಳು. ಇನ್ನೂ ಹದಿನೈದು ನಿಮಿಷ ಕೂಡ ಕಳೆದಿರಲಿಲ್ಲ. ಅಷ್ಟರಲ್ಲೇ ದೊಡ್ಡ

ಸೊಸೆಯು ಹೊರಗಿನಿಂದ, "ನಿನ್ನ ಪೂಜೆ ಇವತ್ತೆಲ್ಲಾ ಆದರೂ ಮುಗಿಯುವುದಿಲ್ಲವೇನು? ಹೀಗೆ ಮಾಡಿದರೆ ನಡೆಯೋದಿಲ್ಲ. ಹೇಳಿದೀನಿ ನೋಡು" ಎಂದು ಕೂಗಿದಳು. ಅನುಪಮೆಯು ಶಿವನಿಗೆ ನೀರೆರೆಯುತ್ತಿದ್ದಳು. ಏನನ್ನೂ ಹೇಳಲಿಲ್ಲ. ದೊಡ್ಡ ಸೊಸೆಯು ಹತ್ತು ನಿಮಿಷಗಳ ಮೇಲೆ ಪುನಃ ಬಂದು ಹೌಹಾರಿ, "ಇಷ್ಟೊಂದು ಪುಣ್ಯ ಗಳಿಸಿಕೊಳ್ಳಲು ಹೋಗಬೇಡ – ಹೆಚ್ಚಾಗಿ ಗಳಿಸೋಕೆ ಹೋಗಬೇಡ. ಬಹಳ ಪುಣ್ಯವನ್ನು ಗಳಿಸಲು ಇಷ್ಟವಿದ್ದರೆ– ಈ ರೀತಿಯ ಕಾರ್ಯಕ್ರಮವನ್ನು ಜರುಗಿಸಬೇಕಾಗಿದ್ದರೆ ಯಾವುದಾದರೂ ಕಾಡಿಗೋ ಗೀಡಿಗೋ ಹೋಗಿ ಗಳಿಸಿಕೋ. ಇಲ್ಲಿ ಸಂಸಾರದಲ್ಲಿದ್ದುಕೊಂಡು ಈ ವಿಪರೀತವನ್ನು ಸಹಿಸುವುದು ಸಾಧ್ಯವಿಲ್ಲ" ಎಂದು ಕಿರಚಿದಳು. ಈಗಲೂ ಅನುಪಮೆಯು ಏನನ್ನೂ ಹೇಳಲಿಲ್ಲ.

ಆಗ ದೊಡ್ಡ ಸೊಸೆಯು, "ಕುಡಿಯೋಕೆ, ತಿನ್ನೋಕೆ ಏನಾದರೂ ಮಾಡಿದೀಯಾಂತ ಕೇಳುತಾ ಇದೀನಿ" ಎಂದು ಮೊದಲಿಗಿಂತ ಎರಡರಷ್ಟು ಜೋರಾಗಿ ಅರಚಿದಳು.

ಅನುಪಮೆಯು ಬಿಲ್ವಪತ್ರೆಯನ್ನಿಡುತ್ತಾ, "ನನ್ನ ಶರೀರ ಸ್ಥಿತಿ ಚೆನ್ನಾಗಿಲ್ಲ. ನಾನು ಏನನ್ನೂ ಮಾಡಲಾರೆ" ಎಂದಳು.

"ಮಾಡಲಾರೆ? ಹಾಗಾದರೆ ಎಲ್ಲರೂ ಉಪವಾಸವಿರಬೇಕೋ ಹೇಗೆ?"

"ಏಕೆ ನನ್ನ ಹೊರತು ಇನ್ಯಾರೂ ಇಲ್ಲವೇನು? *ಮಹಾ ರಾಜನಿಗೆ ಏನಾಗಿದೆ ?"

"ಅವನಿಗೆ ಜ್ವರ ಬಂದಿದೆ. ಅವನೇನನ್ನು ತಾನೆ ಮಾಡಿಯಾನು ? ಅವನ ಕೈಯಲ್ಲೇನಾಗುತ್ತೆ ?"

"ಅವನ ಕೈಲಾಗದಿದ್ದರೆ ನೀನೇ ಮಾಡು"

"ಏನು ನಾನು ಅಡಿಗೆಯವಳಾಗಲೆ? ನೋವಿನಿಂದ ತಲೆ ಸಿಡಿದು ಹೋಗುತ್ತಿದೆ. ಇಪ್ಪತ್ತುನಾಲ್ಕು ಘಂಟೆಯೂ ಒಬ್ಬ ವೈದ್ಯ ನನ್ನ ಹಿಂದೆ ತಿರುಗುತ್ತಲೇ ಇರುತ್ತಾನೆ. ನಾನು ಒಲೆಯ ಮುಂದೆ ಕೂತು ಬೇಯಲೇನು ?"

ಅನುಪಮೆಗೆ ಕೋಪ ಬಂತು. "ಹಾಗಾದರೆ ಎಲ್ಲರಿಗೂ ಉಪವಾಸವಿರ ಹೇಳು" ಎಂದಳು.

"ಒಳ್ಳೆಯದು. ಹೋಗುತ್ತೇನೆ. ಹೋಗಿ ನಿಮ್ಮಣ್ಣನ ಹತ್ತಿರ ಹೇಳುತ್ತೇನೆ. ನಿನಗೆ ಖಾಯಿಲೆ ಎಲ್ಲಿಂದ ಬಂತು ? ಈಗತಾನೆ ಸ್ನಾನವಮಾಡಿಕೊಂಡು ಬಂದು ಕೂತಿದ್ದೀ. ಇನ್ನೇನು ಈಗಲೇ ಚೆನ್ನಾಗಿಯೂ ಗಟ್ಟಿಸುತ್ತೀ. ನಿನ್ನ ಅಣ್ಣನಿಗೆ ಕೊಂಚ ಮಾಡಿ ಬಡಿಸಲಾರೆಯೋ ?"

"ಇಲ್ಲ, ನನ್ನಿಂದಾಗೋಲ್ಲ. ಅತ್ತಿಗೆ, ನಾನು ನಿಮ್ಮಿಂದ ಕೊಳ್ಳಲ್ಪಟ್ಟ ದಾಸಿಯಲ್ಲ, ಬಾಯಿಗೆ ಬಂದಂತೆ ಅನ್ನಿಸಿ ಕೊಳ್ಳಲಿಕ್ಕೆ. ನಾನೀ ಮಾತುಗಳೆಲ್ಲವನ್ನೂ ಅಣ್ಣನೊಡನೆ ಹೇಳುತ್ತೇನೆ."

---

*ಉತ್ತರ ಹಿಂದೂ ಸ್ಥಾನದಲ್ಲಿ ಅಡಿಗೆಯವನನ್ನು ಮಹಾರಾಜ ನೆಂದು ಸಂಬೋಧಿಸುವ ರೂಢಿಯುಂಟು.

ದೊಡ್ಡ ಸೊಸೆಯು ನಿರಾಶೆಯಿಂದ, "ಹೋಗಿ ಹೇಳಬೇಡ. ನಿನ್ನ ಅಣ್ಣ ಆಮೇಲೆ ನನ್ನ ತಲೆ ಕಡಿದಾರು" ಎಂದಳು.

ಅನುಪಮೆಯು ಕೊಂಚ ಹೊತ್ತು ಸ್ತಬ್ಧಳಾಗಿದ್ದು ಮತ್ತೆ, "ಅದು ನನಗೆ ಗೊತ್ತು. ಒಂದು ವೇಳೆ ಅಣ್ಣನು ಸರಿಯಾಗಿದ್ದಿದ್ದರೆ ನಿನ್ನ ಸಾಹಸ ಇಷ್ಟು ಏರುತ್ತಿರಲಿಲ್ಲ" ಎಂದಳು.

"ಏಕೆ. ಅವರೇನು ಮಾಡಿದ್ದಾರೆ? ಅನ್ನ ಹಾಕುತ್ತಾರೆ; ಬಟ್ಟೆ ಕೊಡುತ್ತಾರೆ. ಇನ್ನೇನು ಮಾಡಿಯಾರು? ನಿಜವಾಗಿಯೂ ಅವರು ನನ್ನನ್ನು ಹೊರಕ್ಕೆ ಹಾಕಿ ನಿನ್ನನ್ನು ತಲೆಯ ಮೇಲೆ ಕೂಡಿಸಿಕೊಳ್ಳುವುದಿಲ್ಲ – ಆಗ? ಇದಕ್ಕೋಸ್ಕರ ಸುಮ್ಮನೆ ಕೋಪ ಮಾಡಿಕೊಂಡರೆ ಏನು ಪ್ರಯೋಜನ?"

ಪ್ರತಿಯೊಂದು ಪದಾರ್ಥಕ್ಕೂ ಎಲ್ಲೆ ಇದೆ. ಆದರೆ ಅನುಪಮೆಯ ಸಹಿಷ್ಣುತೆಗೆ ಎಲ್ಲೆ ಇಲ್ಲ! ಇಷ್ಟು ದಿನಗಳಿಂದಲೂ ಅವಳು ಯಾವ ಮಾತನ್ನು ಆಡಬಾರದೆಂದಿದ್ದಳೋ ಇಂದು ಆ ಮಾತು ಬಾಯಿಂದ ಬಂದು ಬಿಟ್ಟಿತು. "ಅಣ್ಣನು ನನಗೆ ಉಡಲಿಕ್ಕೇನು ಕೊಟ್ಟಾನು? ತಿನ್ನಲಿಕ್ಕೇನು ಕೊಟ್ಟಾನು? ನನ್ನ ತಂದೆಯವರು ಗಳಿಸಿಟ್ಟ ಯಾವ ಹಣದಿಂದ ಅವನು ತಿನ್ನುತ್ತಾನೋ, ಉಡುತ್ತಾನೋ ಅದೇ ಹಣದಿಂದ ನಾನೂ ತಿನ್ನುತ್ತೇನೆ, ಉಡುತ್ತೇನೆ" ಎಂದು ಹೇಳಿದಳು.

ದೊಡ್ಡ ಸೊಸೆಯು ಕೋಪಗೊಂಡು, "ಈ ಮಾತು ನಿಜವಾದರೆ ನಿನ್ನ ತಂದೆಯವರು ನಿನ್ನನ್ನು ಬೀದಿಯ ಭಿಕಾರಿಯನ್ನಾಗಿ ಮಾಡಿ ಹೋಗುತ್ತಿರಲಿಲ್ಲ" ಎಂದಳು.

''ಬೀದಿಯ ಭಿಕಾರಿಯನ್ನಾಗಿ ಅವರು ಮಾಡಲಿಲ್ಲ. ನೀವೇ ಮಾಡಿದಿರಿ. ಅವರು ನನ್ನನ್ನು ನಿರಾಶ್ರಯ ಳನ್ನಾಗಿಯೂ, ಬಲಹೀನಳನ್ನಾಗಿಯೂ ಮಾಡಿ ಸತ್ತಿಲ್ಲ ವೆಂಬುದು ಊರಿನ ಜನರಿಗೆಲ್ಲ ಗೊತ್ತು. ಆ ರೂಪಾಯಿ ಗಳನ್ನು ಅಣ್ಣನು ಎತ್ತಿಹಾಕದೆ ಹೋಗದಿದ್ದರೆ ನಾನು ನಿನ್ನ ಈ ಬೈಗಳನ್ನು ಸಹಿಸುವ ಸ್ಥಿತಿಯು ಬರುತ್ತಿರಲಿಲ್ಲ.''

ಕೇಳುತ್ತಿದ್ದ ಹಾಗೆಯೇ ಮೊದಲು ದೊಡ್ಡ ಸೊಸೆಯ ಮುಖವು ಇಳಿಮುಖವಾಯಿತು. ಆದರೆ ಮರುಕ್ಷಣ ದಲ್ಲಿಯೇ ಅದನ್ನು ತೋರಗೊಡದಿರಲು ಮುಖದಲ್ಲಿ ಕೋಪವು ಇಮ್ಮಡಿಯಾಯಿತು. ''ಅವರು ಕಳ್ಳರೆಂದು ಊರಿನವರೆಲ್ಲರೂ ತಿಳಿದಿದ್ದಾರೆಯೇ? ಹಾಗಾದರೆ ಅವರಿಗೆ ಈ ಮಾತನ್ನು ಹೇಳುತ್ತೇನೆ.''

''ಹೇಳು. ಬರೀ ಅಷ್ಟೇ ಅಲ್ಲ. ಈ ಪಾಪದ ಫಲವನ್ನು ಅವನು ಅನುಭವಿಸಲೇಬೇಕೆಂದು ಕೂಡ ಹೇಳು.''

ಆ ದಿನ ಹಾಗೆಯೇ ಕಳೆದುಹೋಯಿತು. ಈ ಮಾತಿನ ಪರಿಸ್ಥಿತಿಯೆಲ್ಲವನ್ನೂ ಚಂದ್ರನಾಥ ಬಾಬುವು ಕೇಳಿದನು. ಆದರೆ ಅವನು ಬದಲು ವಾದವನ್ನೇನೂ ಮಾಡಲಿಲ್ಲ.

ಚಂದ್ರನಾಥ ಬಾಬುವಿನ ಮನೆಯಲ್ಲಿ ಭೋಲನೆಂಬ ಒಬ್ಬ ಹುಡುಗ ಚಾಕರನಿದ್ದ. ಐದಾರು ದಿನಗಳ ಮೇಲೆ ಚಂದ್ರನಾಥ ಬಾಬುವು ಅವನನ್ನು ಮನೆಯೊಳಕ್ಕೆ ಕರೆದು ಹೊಡೆಯಲು ಮೊದಲು ಮಾಡಿದ, ಅವನ ಅಳು, ಕಿರಚು ವಿಕೆಯನ್ನು ಕೇಳಿ ಎಲ್ಲಾ ದಾಸ ದಾಸಿಯರು ಓಡಿಬಂದರು– ಅಲ್ಲಿಯವರೆಗೂ ಹಾಗೆಯೇ ಹೊಡೆಯಲಾಗುತ್ತಿತ್ತು. ಅನು ಪಮೆಯು ತನ್ನ ಕೊಠಡಿಯಲ್ಲಿ ಕುಳಿತು ಪೂಜೆಯನ್ನು

ಮಾಡುತ್ತಿದ್ದಳು. ಪೂಜೆಯನ್ನು ಬಿಟ್ಟು ಅವಳೂ ಓಡಿ ಬಂದಳು. ಆಗ ಹುಡುಗನ ಬಾಯಿ ಮೂಗುಗಳಿಂದ ರಕ್ತ ಹರಿಯುತ್ತಿತ್ತು. ಅನುಪಮೆಯು, "ಅಣ್ಣ, ಇದೇನು ಮಾಡುತ್ತಾ ಇದ್ದೀ. ಸತ್ತುಹೋದರೆ?" ಎಂದು ಕಿರಚಿದಳು. "ಇವತ್ತು ಈ ಹೆಡ್ಡನನ್ನು ಕೊಂದೇ ಬಿಡುತ್ತೇನೆ. ಜೊತೆಯಲ್ಲೇ ನಿನ್ನೂ ಕೂಡ ಕೊಂದು ಬಿಡುತ್ತಿದ್ದೆ. ನೀನು ಹೆಂಗಸಾಗಿ ಹುಟ್ಟಿದ್ದರಿಂದ ಬಚಾಯಿಸಿಕೊಂಡೆ. ನನ್ನ ಮನೆಯಲ್ಲಿ ನಾನಿಷ್ಟು ಪಾಪ ಮಾಡಲಾರೆ. ತಂದೆಯವರು ನಿನಗೆ ಐದು ನೂರು ರೂಪಾಯಿಗಳನ್ನು ಕೊಟ್ಟು ಹೋಗಿದ್ದಾರೆ. ಅದನ್ನ ತೆಗೆದುಕೊಂಡು ಇವತ್ತೇ ಮನೆ ಬಿಟ್ಟು ಹೊರಟು ಹೋಗು" ಎಂದು ಚಂದ್ರನಾಥ ಬಾಬುವು ಕಿರಚಿದನು.

ಅನುಪಮೆಗೆ ಏನೂ ಅರ್ಥವಾಗಲಿಲ್ಲ. "ಏಕೆ?" ಎಂದಿಷ್ಟೇ ಕೇಳಿದಳು.

"ಏನೂ ಇಲ್ಲ. ಇವತ್ತೇ ರೂಪಾಯಿ ತೆಗೆದುಕೊಂಡು ಭೋಲನೊಡನೆ ಇಲ್ಲಿಂದ ಹೊರಟು ಹೋಗು. ಹೊರಗೆ ಹೋಗಿ ಮನಸ್ಸಿಗೆ ಬಂದಂತೆ ಮಾಡು."

ಅನುಪಮೆಯು ಅಲ್ಲೇ ಮೂರ್ಛಿತಳಾಗಿ ಬಿದ್ದುಬಿಟ್ಟಳು. ದಾಸ ದಾಸಿಯರೆಲ್ಲರೂ ಈ ಮಾತನ್ನು ಕೇಳಿದರು. ಕೆಲವರು ಮುಖದ ಮೇಲೆ ಕೈಯಿಟ್ಟುಕೊಂಡು ನಕ್ಕರು. ಕೆಲವರು ನಗುವನ್ನು ತಡೆದುಕೊಂಡು ಒಳ್ಳೆಯವರಂತೆ ಅಲ್ಲಿಂದ ಜಾರಿದರು. ಇನ್ನೂ ಕೆಲವರು ಓಡಿ ಅನುಪಮೆಯನ್ನು ಎತ್ತಲುಪಕ್ರಮಿಸಿದರು. ಚಂದ್ರನಾಥ ಬಾಬುವು ಮೃತಪ್ರಾಯ ಭೋಲನ ಮುಖದ ಮೇಲೆ ಮತ್ತೊಂದು ಪೆಟ್ಟನ್ನು ಹೇರಿಸಿ ಹೊರಗೆ ಹೊರಟು ಹೋದನು.

---

೬

ಇಂದು ಅನುಪಮೆಯ ಕಡೆಯ ದಿನ. ಈ ಮನೆಯಲ್ಲಿ ಅವಳು ಈಗ ಇರಲಾರಳು. ಯಾವಾಗ ಅವಳು ಹುಷಾರಾದಳೋ ಆವಾಗಿನಿಂದ ಯಾವ ಸುಖವೂ ಅವಳಿಗೆ ದೊರೆಯಲಿಲ್ಲ. ಬಾಲ್ಯ ದಿಂದಲೂ ಪ್ರೇಮಮಾಡುವುದನ್ನು ಮೊದಲುಮಾಡಿ ಅವಳ ಮನಶ್ಶಾಂತಿಯನ್ನು ಅವಳೇ ನಷ್ಟಪಡಿಸಿಕೊಂಡಿದ್ದಳು. ಅತಿಯಾಗಿ ಪ್ರೇಮ ಮಾಡಿದ್ದಳು. ಅದರಿಂದ ಬ್ರಹ್ಮನು ಅವಳಿಗೆ ಕೊಂಚಕೂಡ ಸುಖವನ್ನು ಕೊಡಲಿಲ್ಲ. ತನ್ನ ಕಲ್ಪನೆಯಿಂದ ಯಾರನ್ನು ಪ್ರೇಮಮಾಡುತ್ತಿದ್ದಳೋ ಅವನನ್ನು ಸೇರಲಾಗಲಿಲ್ಲ. ಮತ್ತು ಯಾವನು ಅವಳನ್ನು ಪ್ರೇಮಮಾಡುತ್ತಿದ್ದನೋ ಅವನನ್ನು ಅವಳು ಓಡಿಸಿಬಿಟ್ಟಿದ್ದಳು. ಅವಳಿಗೆ ತಾಯಿಯಿಲ್ಲ - ತಂದೆಯಿಲ್ಲ. ಇರಲೆಲ್ಲೂ ಜಾಗವಿಲ್ಲ. ಸ್ತ್ರೀಯರಿಗೆ ಒಂದೇ ಒಂದು ಅವಲಂಬಿನವೆಂದರೆ ಅವರ ಸತೀತ್ವದ ಯಶಸ್ಸು. ಅದನ್ನೂ ಕೂಡ ಅವಳಿಂದ ಕಸಿದುಕೊಳ್ಳಲು ಈಶ್ವರನು ಇಚ್ಛಿಸುತ್ತಾನೆ. ಇದರಿಂದ ಈಗ ಅವಳಿಗೆ ಮನೆಯಲ್ಲಿರಲು ಇಷ್ಟವಿಲ್ಲ. ಕ್ಷೋಭೆಯಿಂದ ಅವಳ ಹೃದಯವು ಒಡೆದುಹೋಗುತ್ತಿದೆ.

ನಿಸ್ತಬ್ಧ ಮತ್ತು ನೀರವವಾದ ಬೆಳದಿಂಗಳಿನ ರಾತ್ರಿ. ಹಿಂದಿನ ಬಾಗಿಲನ್ನು ತೆಗೆದು ಅವಳು ಮತ್ತೆ ಅದೇ ಹಳೆಯ ಕೊಳದ ಮೆಟ್ಟಲುಗಳ ಮೇಲೆ ಹೋಗಿ ಕುಳಿತುಕೊಂಡಳು. ಅನುಪಮೆಯು ಈಗ ಬುದ್ಧಿವಂತಳಾದಳು. ಅವಳಿಗೆ ಈ ಜುವುದು ಬರುತ್ತಿದ್ದುದರಿಂಧ ಮೊದಲು

ಸಾಯಲು ಆಗಲಿಲ್ಲ. ಈ ಸಲ ಅವಳು ತನ್ನ ನಾಶವನ್ನು ಮಾಡಿಕೊಳ್ಳಲು ಒಂದು ಕೊಡವನ್ನು ಜೊತೆಯ ಲ್ಲಿ ತಂದಿದ್ದಳು. ಈಗ ಅವಳು ಪೂರ್ಣ ಮುಳುಗಿ ಹೋಗಲು ಬೇಕಾದಷ್ಟು ನೀರಿರುವ ಜಾಗವನ್ನು ಕೊಳದಲ್ಲಿ ಹುಡುಕಿ ನಿಜವಾಗಿಯೂ ಮುಳುಗಿ ಸಾಯುವಳು. ಸಾಯುವುದಕ್ಕೆ ಮುಂಚೆ ಪ್ರಪಂಚವು ಬಹಳ ಸುಂದರವಾಗಿ ಕಾಣುತ್ತದೆ. ಮನೆ, ಬಾಗಿಲು, ಆಕಾಶ, ಮೋಡ, ಚಂದ್ರ, ನಕ್ಷತ್ರ, ನೀರು, ಹಣ್ಣು, ಹೂ, ಬಳ್ಳಿ, ಎಲೆ, ಮರ ಎಲ್ಲವೂ ಸುಂದರವಾಗಿ ಕಾಣುತ್ತವೆ. ಎಲ್ಲಿ ನೋಡಿದರಲ್ಲಿ ಮನರಮಿಸುವಂತೆ ರಂಜಿಸುತ್ತವೆ. ಈ ಎಲ್ಲಾ ಪದಾರ್ಥಗಳು ಕೈಯೆತ್ತಿ ಹೇಳುತ್ತವೆ—ಸಾಯಬೇಡ! ನೋಡು ನಾವೆಷ್ಟು ಸುಖದಿಂದಿದ್ದೇವೆ. ನೀನೂ ಸಹಿಸಿಕೊಂಡಿರು. ಒಂದಿಲ್ಲೊಂದು ದಿನ ನೀನೂ ಸುಖಿಯಾಗುವೆ. ಆಗದಿದ್ದರೆ ನಮ್ಮ ಬಳಿಗೆ ಬಾ, ನಾವು ನಿನ್ನನ್ನು ಸುಖಿಯನ್ನಾಗಿ ಮಾಡುತ್ತೇವೆ. ವ್ಯರ್ಥವಾಗಿ ಬ್ರಹ್ಮನು ದಯಪಾಲಿಸಿರುವ ಆತ್ಮವನ್ನು ನರಕಕ್ಕೆ ತಳ್ಳಬೇಡ. ಇದೇ ಕಾರಣದಿಂದ, ಸಾಯಲು ಸಿದ್ಧನಾಗಿರುವ ಮನುಷ್ಯನು ಮತ್ತೆ ಹಿಮ್ಮೆಟ್ಟುತ್ತಾನೆ. ಹಿಮ್ಮೆಟ್ಟ ವಾಪಸ್ಸು ಬಂದಮೇಲೆಯೂ ಅವನಿಗೆ ಪ್ರಪಂಚದಲ್ಲಿ ಕೊಂಚಕೂಡ ಸುಖವಿಲ್ಲ; ಎಲ್ಲೆಯಿಲ್ಲದ ಪ್ರಪಂಚದಲ್ಲಿ ನಿಲ್ಲಲೊಂದಿಷ್ಟೂ ಸ್ಥಳವಿಲ್ಲ; ತನ್ನವರೆಂದು ಹೇಳಿಕೊಳ್ಳಲು ಯಾರೂ ಇಲ್ಲ. ಆಗ ಮತ್ತೆ ಸಾಯಲು ಇಚ್ಛಿಸುತ್ತಾನೆ. ಮರುಕ್ಷಣವೇ, ಏನು ಕಾರಣದಿಂದಲೋ ಗೊತ್ತಿಲ್ಲ, ಹೃದಯದಿಂದ, "ಛಿ! ಛಿ! ಹಿಂದಿರುಗು—ಇಂತಹ ಕೆಲಸ ಮಾಡಬೇಡ. ಸಾಯುವುದರಿಂದ ಎಲ್ಲಾ ದುಃಖಗಳೂ

ಉಡುಗಿ ಹೋಗುತ್ತವೇನು? ಇದಕ್ಕಿಂತಲೂ ಹೆಚ್ಚು ಭಯಂಕರ ದುಃಖದಲ್ಲಿ ಬೀಳುವುದಿಲ್ಲವೆಂದು ನಿನಗೇನು ಗೊತ್ತು?'' ಎಂಬ ಧ್ವನಿಯು ಹುಟ್ಟುತ್ತದೆ. ಸಾಕು. ಇಷ್ಟಕ್ಕೆ ಮನುಷ್ಯನು ಸಂಕುಚಿತನಾಗಿ ಹಿಮ್ಮೆಟ್ಟಿ ನಿಂತು ಬಿಡುತ್ತಾನೆ. ಅನುಪಮೆಗೆ ಈ ಮಾತುಗಳೆಲ್ಲ ಏತಕ್ಕೆ ಗಮನಕ್ಕೆ ಬರುತ್ತಿರಲಿಲ್ಲ? ಆದರೆ ಮತ್ತೆಯೂ ಅನುಪಮೆಯು ಸತ್ತೇ ಸಾಯುವಳು. ಯಾವ ರೀತಿಯಿಂದಲೂ ಉಳಿದ ಕೊಳ್ಳಲಾರಳು.

ತಂದೆಯ ಮಾತುಗಳು ಗಮನಕ್ಕೆ ಬಂದವು. ತಾಯಿಯ ಭರವಸೆ ಗಮನಕ್ಕೆ ಬಂತು. ಜೊತೆಯಲ್ಲೇ ಇನ್ನೊಬ್ಬನದೂ ಭರವಸೆ ಬಂತು. ಅದು ಲಲಿತನದು. ಅವಳನ್ನು ಪ್ರೀತಿಸುತ್ತಿದ್ದವರೆಲ್ಲರೂ ಒಬ್ಬೊಬ್ಬರಾಗಿ ಹೊರಟರು. ಅವರಲ್ಲಿ ಒಬ್ಬನು ಮಾತ್ರ ಜೀವಿಸಿದ್ದಾನೆ. ಅವನು ಅವಳನ್ನು ಪ್ರೇಮಮಾಡಿದ್ದನು. ಪ್ರೇಮಭಿಕ್ಷೆಗಾಗಿ ಬಂದೂ ಇದ್ದ. ಹೃದಯದೇವಿಯೆಂದು ಪೂಜಿಸಲು ಬಂದಿದ್ದ. ಅನುಪಮೆಯು ಅವನ ಪೂಜೆಯನ್ನು ಸ್ವೀಕರಿಸಲಿಲ್ಲ. ಬದಲಾಗಿ ಅವನಿಗೆ ಅಪಮಾನಮಾಡಿ ಓಡಿಸಿದಳು. ಇಷ್ಟೇ ಅಲ್ಲ ಅವನನ್ನು ಜೈಲಿನವರೆಗೂ ತಲುಪಿಸಿದಳು. ಲಲಿತನು ಅಲ್ಲಿ ಎಷ್ಟು ಕಷ್ಟಗಳನ್ನು ಅನುಭವಿಸಿದ. ನಿಜ! ಒಂದು ವೇಳೆ ಅಲ್ಲಿ ಅವನು ಅನುಪಮೆಯನ್ನು ಬೈದಿರಬಹುದು; ಶಪಿಸಿರಬಹುದು. ಅವಳು ಯೋಚಿಸಿದಳು— ಖಂಡಿತವಾಗಿಯೂ ಆ ಪಾಪದಿಂದಲೇ ನನಗೆ ಇಂತಹ ದಾರುಣವಾದ ಕಷ್ಟ ಬಂದಿದೆ. ಇಷ್ಟೊಂದು ವೇದನೆಯಾಗುತ್ತಿದೆ. ಅವನು ಜೈಲಿನಿಂದ ವಾಪಸ್ಸು ಬಂದಿದ್ದಾನೆ. ಈಗ ಅವನು ಒಳ್ಳೆಯವ

ನಾಗಿದ್ದಾನೆ. ಕುಡಿಯುವುದನ್ನು ಬಿಟ್ಟು ದೇಶೋಪಕಾರ ಮಾಡಿ ಯಶಸ್ಸನ್ನು ಗಳಿಸಿದ್ದಾನೆ. ಅವನು ಈಗಲೂ ನನ್ನನ್ನು ಜ್ಞಾಪಿಸಿಕೊಳ್ಳುತ್ತಾನೆಯೇ ? ಹಾಗೆ ಆಗಲೂ ಬಹುದು. ಆಗದಿರಲೂ ಬಹುದು. ಆದರೆ ಇದರಿಂದೇನಾಗುತ್ತೆ ? ನನ್ನ ಹೆಸರಿನಮೇಲೆ ಜೋಡಿಸಿರುವ ಕಲಂಕವನ್ನು ಅವನೇನು ಕೇಳಿಲ್ಲವೆ ? ನಾನು ಕಲಂಕಿನಿಯಾಗಿ ಪ್ರಾಣ ಕಳೆದುಕೊಂಡು ಊರಲೆಲ್ಲಾ ಗೊತ್ತಾದಾಗ, ನಾಳೆ ನನ್ನ ದೇಹವು ನೀರಿನಮೇಲೆ ತೇಲಿದಾಗ ಅಯ್ಯೋ, ಥು ! ಥು ! ಎಷ್ಟು ತುಚ್ಛವಾಗಿ ಮುಖ ತಿರುಗಿಸಿಕೊಂಡಾನು.

ಅನುಪಮೆಯು ಸೆರಗಿನಿಂದ ಕೊಡವನ್ನು ಕತ್ತಿಗೆ ಕಟ್ಟಿಕೊಂಡಳು. ಇಷ್ಟರಲ್ಲಿ ಯಾರೋ ಗೊತ್ತಿಲ್ಲ, ಹಿಂದಿನಿಂದ ಕೂಗಿದರು, "ಅನುಪಮಾ" ಎಂದು. ಅನುಪಮೆಯು ಚಕಿತಳಾಗಿ ಹಿಂತಿರುಗಿ ನೋಡಿದಳು. ಒಬ್ಬ ಎತ್ತರಾಕಾರದ ಮನುಷ್ಯನು ನಿಂತಿದ್ದಾನೆ. ಆಗಂತುಕನು ಮತ್ತೆ, "ಅನುಪಮಾ"ಎಂದು ಕೂಗಿದ. ಅನುಪಮೆಗೆ ಈಸ್ವರವನ್ನು ಹಿಂದೆಲ್ಲೋ ಕೇಳಿದ್ದಂತೆ ನೆನಪಾಯಿತು. ಆದರೆ ಆ ವ್ಯಕ್ತಿಯ ಗುರುತು ಹತ್ತಲಿಲ್ಲ. ಅವಳು ಸುಮ್ಮನಿದ್ದಳು.

"ಅನುಪಮಾ, ಆತ್ಮಹತ್ಯೆ ಮಾಡಿಕೊಳ್ಳಬೇಡ" ಅನುಪಮೆಯು ಯಾವತ್ತೂ ಎಲ್ಲೂ ನಾಚಿಕೆ ಪಡುವವಳಾಗಿರಲಿಲ್ಲ. ಧೈರ್ಯದಿಂದೊಡಗೂಡಿ, "ನಾನು ಆತ್ಮಹತ್ಯೆಯನ್ನು ಮಾಡಿಕೊಳ್ಳುತ್ತೇನೆಂದು ನಿನಗೆ ಹೇಗೆ ಗೊತ್ತಾಯಿತು" ಎಂದಳು.

" ಹಾಗಾದರೆ ಈ ಕೊಡವೇಕೆ ಕತ್ತಿಗೆ ಕಟ್ಟಲ್ಪಟ್ಟಿದೆ "

ಅನುಪಮೆಯು ಮೌನದಿಂದಿದ್ದಳು.

ಆಗಂತುಕನು ಕೊಂಚ ಮುಗುಳು ನಗೆಯಿಂದ, "ಆತ್ಮ ಹತ್ಯೆಯಿಂ ಏನಾಗುತ್ತದೆಂದು ಗೊತ್ತೆ ?" ಎಂದು ಕೇಳಿದನು.

"ಏನಾಗುತ್ತೆ ?"

"ಅನಂತವಾದ ನರಕ ಪ್ರಾಪ್ತಿ"

ಅನುಪಮೆಯು ನಡುಗಿದಳು. ಅವಳು ನಿಧಾನವಾಗಿ ಕೊಡವನ್ನು ಬಿಚ್ಚಿ ಅಲ್ಲಿ ಇಟ್ಟುಬಿಟ್ಟಳು. "ಈ ಪ್ರಪಂಚದಲ್ಲಿ ನನಗೆಲ್ಲೂ ಸ್ಥಳವಿಲ್ಲ"

"ಮರೆತು ಬಿಟ್ಟೆಯಾ ? ಹಾಗಾದರೆ ನಾನು ಜ್ಞಾಪಿಸಿ ಕೊಡುತ್ತೇನೆ. ಸುಮಾರು ಆರು ವರುಷಗಳ ಹಿಂದೆ ಇದೇ ಜಾಗದಲ್ಲೇ ಒಬ್ಬ ಅಭಾಗನು ನಿನಗೆ ಜೀವನ ಪರ್ಯಂತ ಸ್ಥಾನಕೊಡಲು ಇಷ್ಟಪಟ್ಟಿದ್ದನು. ಜ್ಞಾಪಕವಿದೆಯೆ ?"

ಲಜ್ಜೆಯಿಂದ ಅನುಪಮೆಯ ಮುಖವು ಸುಕ್ಕಾಯಿತು. "ಹೌದ, ಜ್ಞಾಪಕವಿದೆ" ಎಂದಳು.

"ಹಾಗಾದರೆ ಈ ಸಂಕಲ್ಪವನ್ನು ಬಿಟ್ಟುಬಿಡು".

"ನನ್ನ ಹೆಸರಿನ ಮೇಲೆ ಕಳಂಕ ಹೊರೆಸಲ್ಪಡುತ್ತಿದೆ. ನಾನು ಬದುಕಿರಲು ಇಷ್ಟಪಡುವುದಿಲ್ಲ"

"ಸಾಯುವುದರಿಂದ ಕಳಂಕ ತೊಡೆದು ಹೋಗುತ್ತೇನು ?

'ತೊಡೆದು ಹೋಗಲಿ, ಬಿಡಲಿ. ನಾನೇನು ಅದನ್ನು ಕೇಳಲು ಬರುವ ಹಾಗಿರುವುದಿಲ್ಲ".

"ನೀನು ತಪ್ಪು ತಿಳಿದುಕೊಂಡಿದ್ದೀ ಅನುಪಮಾ. ಸಾಯುವುದರಿಂದ ಆ ಕಳಂಕವು ನೆರಳಿನಂತೆ ಸದಾ ನಿನ್ನ

ಹೆಸರಿನೊಡನೆಯೇ ಅಳಿಯುತ್ತಿರುತ್ತೆ. ಯೋಚಿಸಿ ನೋಡು. ಈ ಸುಳ್ಳು ಕಳಂಕ ಎಂದೂ ಚಿರಸ್ಥಾಯಿಯಾಗಲಾರದು''

''ಆದರೆ ನಾನೆಲ್ಲಿ ಹೋಗಿ ಬದುಕಿರಲಿ''

''ನನ್ನ ಜೊತೆಯಲ್ಲಿ ಬಾ"

ಅನುಪಮೆಯು ಯೋಚಿಸಿದಳು, ''....ಹೀಗೀ ಮಾಡ ಬೇಕು. ಇವರ ಕಾಲು ಕಟ್ಟಿ ಬೇಡುತ್ತೇನೆ-ನನ್ನನ್ನು ಕ್ಷಮಿಸಿ. ನಿಮ್ಮ ಹತ್ತಿರ ಬಹಳ ಹಣವಿದೆ. ನನಗೊಂಚ ಭಿಕ್ಷೆಯಾಗಿ ನೀಡಿ. ಎಲ್ಲಿಯಾದರೂ ದೂರ ಹೋಗಿ ಗುಟ್ಟಾಗಿ ಇದ್ದುಬಿಡುತ್ತೇನೆ" ಎಂದು. ಆಮೇಲೆ ಬಹಳ ಹೊತ್ತು ಸುಮ್ಮನಿದ್ದು ಯೋಚಿಸಿ, ''ನಾನು ಬರುವುದಿಲ್ಲ'' ಎಂದು ಹೇಳಿದಳು.

ಮಾತು ಮುಗಿಯುವುದೇ ತಡ ಅನುಪಮೆಯು ನೀರಿ ನೊಳಕ್ಕೆ ಧುಮುಕಿದಳು.

* * *

ಅನುಪಮೆಗೆ ಜ್ಞಾನಬಂದಾಗ ತಾನು ಒಂದು ಸುಸಜ್ಜಿತ ವಾದ ಕೊಠಡಿಯಲ್ಲಿ ಮಂಚದಮೇಲೆ ಮಲಗಿರುವುದನ್ನೂ ಪಕ್ಕದಲ್ಲೇ ಲಲಿತ ಮೋಹನನು ಕುಳಿತಿರುವುದನ್ನೂ ನೋಡಿದಳು. ಅನುಪಮೆಯು ಕಣ್ಣುಗಳನ್ನು ಕೂಡಿಸಿ ಕಾತರ ಸ್ವರದಿಂದ, ''ನನ್ನನ್ನೇಕೆ ಬದುಕಿಸಿದೆ ?" ಎಂದಳು.